# ಕನಕದಾಸರು

ಲೇಖಕರು :

ಡಾ|| ಎಂ. ಕೆ. ಭಾರತೀರಮಣಾಚಾರ್ಯ

ಶ್ರುತಿ ಪ್ರಕಾಶನ

ಬೆಂಗಳೂರು-560 019

# ಎರಡು ಮಾತು

ಒಂದು ಕಾಲದಲ್ಲಿ ತಿರುಪತಿ ಕ್ಷೇತ್ರಕ್ಕೂ ಸಹ ಪಂಢರಪುರದ ವಾರಕರಿಗಳಂತೆ ನಡೆದುಕೊಂಡೇ ಬಂದು ಹೋಗುವ ಸಂಪ್ರದಾಯವಿತ್ತು. ಅದರಲ್ಲಿಯೂ ಕೂಡ ಕರ್ನಾಟಕ ಭಾಗದಿಂದ–ವಿಜಾಪುರದ ಆದಿಲ್‌ಶಾಹಿ ರಾಜ್ಯದ ವತಿಯಿಂದ ಒಂದು ಪಲ್ಲಕ್ಕಿಯು ಭಕ್ತಾದಿಗಳಿಂದ ಹೊರಡಿಸಲ್ಪಡುತ್ತಿತ್ತು. ಹಳೇ ಹುಬ್ಬಳ್ಳಿ, ಜಮಖಂಡಿ, ನರಗುಂದ, ಲಕ್ಷ್ಮೇಶ್ವರ, ದೇವದುರ್ಗ ಮೊದಲಾದ ಭಾಗಗಳಿಂದ ಹೊರಟ ಈ ಯಾತ್ರಿಕರು ಲಕ್ಷ್ಮೇಶ್ವರದಲ್ಲಿ ಒಂದುಗೂಡಿಕೊಂಡು ತಮ್ಮ ಪ್ರಯಾಣವನ್ನು ಮುಂದುವರಿಸುವುದು ಪದ್ಧತಿಯಾಗಿತ್ತು. ಹೀಗೆ ತಮ್ಮ ದೇವನ ಪಲ್ಲಕ್ಕಿಯೊಂದಿಗೆ ನಡೆದುಕೊಂಡು ಬಂದ ಗುಂಪಿನವರಿಗೆಲ್ಲ ತಿರುಪತಿ ಕ್ಷೇತ್ರದಲ್ಲಿ ಪುಷ್ಕರಿಣಿಯ ಸುತ್ತಮುತ್ತಲೂ ಬಿಡಾರ ಮಾಡಲು ಪೂರ್ವನಿಗದಿತವಾದ ಕಲ್ಲುಮಂಟಪಗಳನ್ನು ವ್ಯವಸ್ಥೆ ಮಾಡಲಾಗಿತ್ತು. ಇಂದು ತಿರುಪತಿಯ ಭೌತಿಕ ವೈಭವವನ್ನು ಬೆಳೆಸಲು ಆ ಹಿಂದಿನ ಕಲ್ಲುಮಂಟಪಗಳನ್ನೆಲ್ಲ ಕೆಡಹಲಾಗಿದೆ. ಈಗ ಕೇವಲ ಪುರಂದರದಾಸರ ಮಂಟಪವು ಮಾತ್ರ ಉಳಿದುಕೊಂಡಿದೆ. ದೇವದುರ್ಗದ ಮಂಟಪವೂ ಸಹ ಯಥಾರೀತಿಯಾಗಿದೆ. ಇನ್ನುಳಿದ ಮಂಟಪಗಳೆಲ್ಲ ಹೇಳಹೆಸರಿಲ್ಲದಂತಾಗಿವೆ. ಬಹುದೂರದಿಂದ ಬಳಲಿ ಆಯಾಸಗೊಂಡು ಬಂದ ಈ ಯಾತ್ರಿಕರಿಗೆಲ್ಲ ಆಹಾರಪದಾರ್ಥಗಳನ್ನೊದಗಿಸಲು ಧನಿಕರಾದ ಅಂದಿನ ವಣಿಕ ಶ್ರೇಷ್ಠಿಗಳು ಚಕ್ಕಡಿಯ ತುಂಬೆಲ್ಲ ದವಸ ಧಾನ್ಯಗಳನ್ನು ತುಂಬಿಕೊಂಡು ಬರುತ್ತಿದ್ದರು ಯಾರಾದರೂ ತಮ್ಮಿಂದ ದಾನ ಸ್ವೀಕಾರ ಮಾಡುತ್ತಾರೆಯೋ ಎಂದು ಕಾದಿರುತ್ತಿದ್ದರು. 44805CR

ಒಂದು ದಿನ ಕನಕದಾಸರು ಬಹುದೂರದ ದಾರಿ ತುಳಿದು ಬೆಟ್ಟದ ಮೇಲೆ ಬಂದಾಗ ಏಕಾಂತ ಸೇವೆಯು ಮುಗಿದುಹೋಗಿ ದೇವಮಂದಿರದ ಬಾಗಿಲುಗಳನ್ನೆಲ್ಲ ಮುಚ್ಚಿ ಭದ್ರವಾಗಿ ಬೀಗ ಹಾಕಲಾಗಿತ್ತು. ದೂರದಿಂದಲೇ ಶಿಖರ ಶ್ರೀನಿವಾಸನಿಗೆ ಕೈಮುಗಿದು, ಸ್ವಾಮಿ ಪುಷ್ಕರಿಣಿಯಲ್ಲಿ ಕೈಕಾಲು ತೊಳೆದು, ಹೊಟ್ಟೆ ತುಂಬ ನೀರು ಕುಡಿದು, ತಮ್ಮ ಕಲ್ಲುಮಂಟಪಕ್ಕೆ ಬಂದು ವಿಶ್ರಮಿಸಿದರು. ತಕ್ಷಣವೇ ನಿದ್ರಾದೇವಿ ಅವರನ್ನು ಆಶ್ರಯಿಸಿದಳು. ಇದೆಲ್ಲ

ವನ್ನೂ ನೋಡುತ್ತಿದ್ದ ಶ್ರೀನಿವಾಸನು ಮುಗುಳುನಗೆಯಿಂದ ನಗುತ್ತಿದ್ದ. ಒಂದು ಸಲ ಹೃದಯಮಧ್ಯದಲ್ಲಿ ವಿರಾಜಮಾನಳಾಗಿದ್ದ ಶ್ರೀದೇವಿಯತ್ತ ಗಮನಹರಿಸಿದ. ಅವಳ ಮನವು ತಳಮಳಗೊಳ್ಳುತ್ತಿತ್ತು. "ಮಗನು ಉಪವಾಸ ಮಲಗಿದಾಗಲೂ ನೀನು ನಿಶ್ಚಿಂತಳಾಗಿ ನೋಡುತ್ತಿರುವೆಯಲ್ಲ" ಎಂದು ದೇವ ಮೂದಲಿಸಿದ. ಅದನ್ನು ಕೇಳಿದ ಲೋಕಮಾತೆಯು "ಸ್ವಾಮಿ, ನಾನು ತಮ್ಮ ಆಜ್ಞಾಧಾರಕಳಲ್ಲವೇ ? ಮೇಲಾಗಿ ಆ ಮಗು ತಮಗೂ ಸೇರಿದುದಲ್ಲವೇ ? ಹೀಗಿರುವಾಗ ಕೇವಲ ನನ್ನನ್ನೇ ದೂಷಿಸುವುದೇ ?" ಎಂದು ಹೇಳುತ್ತಿದ್ದಂತೆ, "ಅದೆಲ್ಲ ಆಮೇಲೆ ಹೇಳುವೆಯಂತೆ, ಮೊದಲು ಬಂಗಾರದ ತಟ್ಟೆ ತುಂಬ ನಮ್ಮ ಮುಂದೆ ಇರಿಸಿಹೋದ ಪದಾರ್ಥಗಳನ್ನು ತೆಗೆದುಕೊಂಡು ಹೋಗಿ, ಆ ನನ್ನ ಭಕ್ತನಿಗೆ ಉಣಬಡಿಸಿ ಬಾ" ಎಂದು ಅಪ್ಪಣೆಯನ್ನಿತ್ತ. ಮಾತೆಗೂ ಅದು ಸರಿ ಎನಿಸಿತು. ತಕ್ಷಣವೇ ಅವಳು ಕಲ್ಲುಮಂಟಪಕ್ಕೆ ಧಾವಿಸಿ ಬಂದಳು. ಗಾಢನಿದ್ರೆಯಲ್ಲಿದ್ದ ಕನಕನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಬಟ್ಟಲಲ್ಲಿದ್ದ ಪದಾರ್ಥಗಳನ್ನು ಆತನ ಬಾಯಿಯಲ್ಲಿಡ ತೊಡಗಿದಳು. ನಿದ್ದೆಗಣ್ಣಿನಲ್ಲಿ ಎಲ್ಲವನ್ನೂ ತಿನ್ನಿಸಿದ ಮೇಲೆ ಶ್ರೀದೇವಿಯು ಪುನಃ ಆ ತಟ್ಟೆಯನ್ನೆತ್ತಿಕೊಂಡು ದೇವಗೃಹಕ್ಕೆ ಮರಳಿ ಬಂದಳು. ಅವಳನ್ನು ಕಾಣುತ್ತಿದ್ದಂತೆ ಸ್ವಾಮಿಯು ನಗತೊಡಗಿದ. ಆಗ 'ಯಾಕೆ ಹೀಗೆ ನಗುತ್ತಿರುವಿರಲ್ಲ, ಎಂದು ಮಾತೆ ಕೇಳಿದಾಗ 'ಹಾಲಿನ ಬಂಗಾರದ ಬಟ್ಟಲು ಎಲ್ಲಿದೆ' ಎಂದು ದೇವನು ಪ್ರಶ್ನೆ ಮಾಡಿದ. ಆಗ ಅವಳ ಗಮನವನ್ನು ಮಂಟಪದತ್ತ ಹರಿಸುವಂತೆ ಹೇಳಿದ. ಕನಕನು ಆ ಬಟ್ಟಲನ್ನೇ ತನ್ನ ತಲೆದಿಂಬಾಗಿಟ್ಟುಕೊಂಡು ಗೊರಕೆ ಹೊಡೆಯುತ್ತಲಿದ್ದ. 'ಎಂಥ ಕೆಲಸವಾಯಿತಲ್ಲ' ಎಂದು ಶ್ರೀಮಾತೆ ಪೇಚಾಡತೊಡಗಿದಳು. 'ಸುಮ್ಮನಿರು, ನಾಳೆ ನೋಡುವೆಯಂತೆ' ಎಂದು ಹೇಳಿ ಅವಳನ್ನು ತಡೆಹಿಡಿದ.

ಪ್ರತಿದಿನದಂತೆ ಅರ್ಚಕರು ಮಂದಿರದ ಒಂದೊಂದೇ ದ್ವಾರಗಳನ್ನು ತೆಗೆಯಲಾರಂಭಿಸಿದರು. ದೇವನಿಗೆ ಸುಪ್ರಭಾತದ ಆರತಿಯನ್ನು ಬೆಳಗುತ್ತಿದ್ದಾಗ ಏಕಾಂತಸೇವೆಗಿರಿಸಿದ ತಟ್ಟೆಯಲ್ಲಿದ್ದ ಒಂದು ಬಟ್ಟಲು ಕಾಣದಾಗಿತ್ತು. ಪದಾರ್ಥಗಳೂ ಬರಿದಾಗಿ ಹೋಗಿದ್ದವು ! ಬಾಗಿಲುಗಳಂತೂ ಎಂದಿನಂತೆ

ಭದ್ರವಾಗಿದ್ದ ತಾವೇ ಅವುಗಳನ್ನು ತೆರೆದು ಒಳಬಂದಿದ್ದರು. ನಡೆದುದನ್ನು ನೋಡಿದಾಗ ಮುಂದೇನು ಮಾಡಬೇಕೆಂಬುದೇ ತೋಚದಂತಾಗಿ ಮೇಲಧಿಕಾರಿಗಳಿಗೆ ಎಲ್ಲ ವಿಷಯವನ್ನೂ ವರದಿ ಮಾಡಿದರು ಸೇವಕರನ್ನು ನಾಲ್ಕೂ ನಿಟ್ಟಿನಲ್ಲಿ ಶೋಧನೆಗಾಗಿ ಕಳಿಸಲಾಯಿತು. ಒಂದು ಕಲ್ಲು-ಮಂಟಪದಲ್ಲಿ ಆ ಬಟ್ಟಲನ್ನೇ ತಲೆದಿಂಬಾಗಿರಿಸಿಕೊಂಡು ಮಲಗಿದ್ದ ಕನಕನನ್ನು ಕಂಡು ಈತನೇ ಕಳ್ಳನೆಂದು ಬಗೆದು ಬಡಿದೆಬ್ಬಿಸಿ ತಂದು ಅಧಿಕಾರಿಗಳ ಮುಂದೆ ನಿಲ್ಲಿಸಿದರು. ಎಲ್ಲ ವಿವರಗಳನ್ನು ಕೇಳಿದಾಗ ತಕ್ಷಣವೇ ಕನಕನನ್ನು ಶಿಕ್ಷಿಸಲು ಅಧಿಕಾರಿಗೆ ಧೈರ್ಯವಾಗಲಿಲ್ಲ. ಮರುದಿನ ನಸುಕಿನ ಜಾವದಲ್ಲಿ ಅಧಿಕಾರಿಯು ಸ್ವಪ್ನದಲ್ಲಿ ಶ್ರೀನಿವಾಸನು ಕಾಣಿಸಿಕೊಂಡು, 'ಕನಕನು ತನ್ನ ಭಕ್ತನಾಗಿದ್ದು, ಆತನು ಹಸಿವೆಯಿಂದ ಬಳಲುತ್ತಿದ್ದಾಗ ತಾನೇ ಆ ಬಟ್ಟಲನ್ನು ಕೊಟ್ಟೆ' ಎಂಬುದಾಗಿ ತಿಳಿಸಿದನು. ಮರುದಿನ ದಾಸರಾಯರನ್ನು ಬಿಡುಗಡೆ ಮಾಡಿ, ಆದರದಿಂದ ಕರೆತಂದು ಸ್ವಾಮಿಯ ಮುಂದೆ ನಿಲ್ಲಿಸಿದರು. 'ಸ್ವಾಮಿ, ನಿನ್ನೆ ತಮ್ಮಿಂದ ಕಸಿದುಕೊಂಡ ಈ ಬಂಗಾರದ ಬಟ್ಟಲನ್ನು ತಮಗೆ ಕೊಡುವಂತೆ ಅಪ್ಪಣೆಯಾಗಿದೆ' ಎಂದು ಕನಕದಾಸರಿಗೆ ಹೇಳಿ ಅದನ್ನು ಅವರ ಕೈಗಿತ್ತರು. 'ಎಲ್ಲವನ್ನೂ ತ್ಯಾಗ ಮಾಡಿದವನಲ್ಲಿ ಏನಾದರೂ ಮೋಹವೆಂಬುದು ಇನ್ನೂ ಉಳಿದಿದೆಯೋ ಎಂದು ನೋಡಲು ನನ್ನ ದೇವನು ಈ ರೀತಿ ನನ್ನೊಂದಿಗೆ ಆಟವಾಡುತ್ತಿದ್ದಾನೆ. ಆತನ ಒಡವೆಗಳನ್ನು ತೆಗೆದುಕೊಂಡು ನಾನೇನು ಮಾಡಲಿ ?' ಎಂದು ಹೇಳಿ ಆ ಸ್ವಾಮಿಗೆ ಅದನ್ನರ್ಪಿಸಿದರು. ಅಂದಿನಿಂದ ಇಂದಿನವರೆಗೆ ಆ ಬಟ್ಟಲನ್ನು "ಕನಕನ ಕಿನ್ಯಾ" ಎಂದು ತೋರಿಸುವ ಸಂಪ್ರದಾಯವಿದೆ. ಶ್ರೀಮದುಡುಪಿಯ ಕ್ಷೇತ್ರದಲ್ಲಿಯೂ ಸಹ ಭಕ್ತನಿಗಾಗಿ ಮುಖ ತಿರುವಿ ನಿಂತು ಸದಾಕಾಲವೂ ಕನಕನ ಕಿಂಡಿ ಎಂದು ಕರೆಯುವಂತೆ ಮಾಡಿದ ದೇವನು ತಿರುಪತಿಯಲ್ಲಿಯೂ ಸಹ ಕನಕನ ಹೆಸರು ಸದಾಕಾಲವೂ ಇರುವಂತೆ ನೋಡಿಕೊಂಡನೆಂದೆನಿಸುತ್ತದೆ. ಕನಕದಾಸರು ತಿರುಪತಿಗೆ ಬಂದಾಗ ಬೆಟ್ಟಕ್ಕೆ ಹೋಗುವ ಮಾರ್ಗದಲ್ಲಿರುವ ಆಂಜನೇಯನ ದೇವಮಂದಿರದಲ್ಲಿ ಬಿಡಾರ ಮಾಡುತ್ತಿದ್ದರೆಂದು ಅಲ್ಲಿಯ ಹಿರಿಯರು ಹೇಳುತ್ತಾರೆ. ಈ ದೇವ ಮಂದಿರದ ಮುಂಭಾಗದಲ್ಲಿ ರುಕ್ಮಿಣಿ ವಿಠಲ ಮಂದಿರವಿದೆ. ಆದರೆ ಈ ಮಾತಿಗೆ ಸಾಕ್ಷಿ ಆಧಾರಗಳಿಲ್ಲ. ಕನಕದಾಸರು ತಮ್ಮ ಜೀವಿತ ಕಾಲದಲ್ಲಿ

ಅನೇಕ ಸಲ ತಿರುಪತಿಗೆ ಬಂದುಹೋದರೆಂಬುದರಲ್ಲಿ ಸಂದೇಹವಿಲ್ಲ ಭಕ್ತ ಹಾಗೂ ಭಗವಂತನ ಸಂಬಂಧವನ್ನು ಹೀಗೆ ಎಂದು ವರ್ಣಿಸಲು ಆದಿಶೇಷನಿಗೂ ಸಹ ಅಸಾಧ್ಯವೆಂದೆನಿಸುತ್ತದೆ.

ದಾಸಸಾಹಿತ್ಯದಲ್ಲಿಯು ಕನಕದಾಸರ ಸ್ಥಾನಮಾನಗಳು ವಿಶಿಷ್ಟ ರೀತಿಯಿಂದ ಕೂಡಿದುದಾಗಿವೆ. ಅವರ ಕೃತಿಗಳಂತೆ ಆ ಮಹಾನುಭಾವರ ಜೀವಿತ ಕಾಲದಲ್ಲಿ ನಡೆದು ಹೋದ ಘಟನೆಗಳೂ ಸಹ ವರ್ಣರಂಜಿತವಾಗಿ ತೋರುತ್ತವೆ. "ಈ ಮಹಾನುಭಾವರನ್ನು ಕುರಿತು ಒಂದು ಕಿರುಕೃತಿ ಬರೆದಿರುವೆ. ಅದಕ್ಕೆ ನಾಲ್ಕು ಮಾತು ಬರೆದುಕೊಡಿ" ಎಂದು ಹಿರಿಯರಾದ, ಪೂಜ್ಯರಾದ ಡಾ|| ಭಾರತೀರಮಣಾಚಾರ್ಯರು ಕೇಳಿದಾಗ ಮನವು ಗಾಬರಿಗಿಟ್ಟುಕೊಂಡಿತು. 'ಈ ಯೋಗ್ಯತೆಯು ನನಗಿದೆಯೇ' ಎಂದು ಉದ್ಗರಿಸಿದಾಗ, 'ನೀವು ಸುಮ್ಮನೆ ಬರೆಯುತ್ತ ನಡೆಯಿರಿ, ಮುಂದಿನದನ್ನು ಸ್ವಾಮಿಗೆ ಬಿಡಿರಿ' ಎಂದು ಧೈರ್ಯ ತುಂಬಿದರು. ಅವರ ಮಾತಿನಂತೆ ನನಗೆ ತಿಳಿದ ಎರಡು ಮಾತನ್ನು ಇಲ್ಲಿ ಬರೆದಿದ್ದೇನೆ. ಒಂದು ರೀತಿಯಲ್ಲಿ ಶ್ರೀನಿವಾಸನೇ ಅವರ ಮುಖದಿಂದ ಈ ಸೇವೆಯನ್ನಪೇಕ್ಷಿಸಿರಬಹುದೆಂದು ನಂಬಿ ಬರೆದಿದ್ದೇನೆ.

ತಮ್ಮ ವಿಧೇಯ

ಆದ್ಯ ರಾಮಾಚಾರ್ಯ

# ಕೃತಜ್ಞತೆ

ಕನಕದಾಸರ ಬಗ್ಗೆ ಒಂದು ಕೃತಿಯನ್ನು ರಚಿಸಲು ಪ್ರೇರಕರಾದವರು ಶ್ರೀ ಅಪ್ಪಣ್ಣಾಚಾರ್ಯರು. ಅವರು ತಿರುಪತಿ ದೇವಾಲಯದ ಆಡಳಿತ ಮಂಡಳಿಯು ರಚಿಸಿರುವ 'ದಾಸಸಾಹಿತ್ಯ ಪ್ರಾಜೆಕ್ಟ್'ನ ಮುಖ್ಯ ನಿರ್ದೇಶಿಕ ಅಧಿಕಾರಿಗಳಾಗಿ ಆಗ ಸೇವೆ ಸಲ್ಲಿಸುತ್ತಿದ್ದರು. ಅವರ ಸೇವೆ ಅನೋಘ ವಾದುದು. ಅವರ ಪರಿಶೀಲನೆಗೆಂದು ನನ್ನ ಹಸ್ತಪ್ರತಿಯನ್ನು ಕಳಿಸಿಕೊಟ್ಟು ಏಳೆಂಟು ವರ್ಷಗಳಾದರೂ ಅವರಿಂದ ಏನೊಂದೂ ಉತ್ತರ ಬಾರದೆ ನಿರಾಶ ನಾಗಿದ್ದೆ. ಅದನ್ನು ಬೆಳಕಿಗೆ ತರಲು ನಮ್ಮ ಮಿತ್ರರಾದ ಆದ್ಯ ರಾಮಾ ಚಾರ್ಯರಲ್ಲಿ ನನ್ನ ಕತೆಯನ್ನು ಹೇಳಿಕೊಂಡೆ. ಅವರಿಂದ ಆ ಕಾರ್ಯ ವಾಯಿತು. ಈಗ ಈ ಕೃತಿ ನಿಮ್ಮ ಕೈ ಸೇರಿದೆ. ಕನಕದಾಸರ ಐದನೇ ಶತಮಾನೋತ್ಸವವನ್ನಾಚರಿಸುತ್ತಿರುವ ಈ ಸಂದರ್ಭದಲ್ಲಿ ಪ್ರಕಟವಾಗ ಬೇಕೆಂಬುದು ತಿರುಪತಿ ಶ್ರೀನಿವಾಸನ ಚಿತ್ತ. ಹರಿಚಿತ್ತ ಸತ್ಯ.

ಇದಕ್ಕೊಂದು ಮುನ್ನುಡಿಯನ್ನು ಬರೆದು ಕೊಡಲು ನಮ್ಮ ಮಿತ್ರ ರಾದ ಆದ್ಯರಾಮಾಚಾರ್ಯರನ್ನು ಕೇಳಿಕೊಂಡೆ. 'ಎರಡು ಮಾತು' ಬರೆದುಕೊಟ್ಟು ಸಹಕರಿಸಿದರು. ಕನ್ನಡ ಜನತೆಗೆ ಪ್ರಸಿದ್ಧ ಸಾಹಿತಿಗಳೂ ಸಹೃದಯರೂ ಸಮಾಜಸೇವಕರೂ ಆದ ಆದ್ಯರ ಪರಿಚಯ ಮಾಡಿ ಕೊಡುವ ಅಗತ್ಯವಿಲ್ಲವೆಂದು ಭಾವಿಸಿದ್ದೇನೆ.

ಶ್ರೀ ಆದ್ಯರಾಮಾಚಾರ್ಯರಂತೆ ಹಲವು ಹತ್ತು ರೀತಿಯಲ್ಲಿ ಈ ಗ್ರಂಥರಚನೆಗೆ ಪ್ರೋತ್ಸಾಹವಿತ್ತವರು ಅನೇಕರು. ಅವರಲ್ಲಿ ಶ್ರೀ ಬಿ ಎನ್. ಸುಬ್ಬರಾಯರ ಹೆಸರನ್ನು ಉಲ್ಲೇಖಿಸುವುದು ನನ್ನ ಕರ್ತವ್ಯ. ಇವರ ಜೀವನದ ಉಸಿರು ದಾಸಸಾಹಿತ್ಯ. ವ್ಯಾಸಸಾಹಿತ್ಯ ಅಂದರೆ ಪುರಾಣಗಳು, ರಾಮಾಯಣ, ಮಹಾಭಾರತ ಮುಂತಾದ ಸಚ್ಛಾಸ್ತ್ರಗಳು ಇವರ ಹೃದಯ. ಶ್ರೀಮನ್ ಮಧ್ವಾಚಾರ್ಯರ ಭಕ್ತಿಪೋಷಕ ದಾರ್ಶನಿಕ ಮತ ಇವರ ಮತ. ಇಂದಿಗೂ ಹರಿಕಥೆ, ಪ್ರವಚನ, ಗಮಕ ಮುಂತಾಗಿ ನಾನಾ ಮುಖಗಳಿಂದ ದಾಸ ಸಾಹಿತ್ಯ ಪ್ರಚಾರದಲ್ಲಿ ತೊಡಗಿರುವವರು. 'ಹರಿದಾಸ ಸಾಹಿತ್ಯ ಸಭಾ' ಎಂಬ ಸಂಸ್ಥೆಯನ್ನು ಸಂಘಟಿಸಿ ಹಲವು ಹತ್ತು ರೀತಿಯಲ್ಲಿ ದಾಸ ಸಾಹಿತ್ಯ ಪ್ರಚಾರವನ್ನು ಮಾಡುತ್ತಿದ್ದಾರೆ.

ಇವರು ಒಳ್ಳೆ ಕಲಾವಿದರು. ಅಭಿನಯ ಪಟುಗಳು. ಅಂತೆಯೇ ಟಿ.ವಿ. ಮತ್ತು ರೇಡಿಯೋಗಳಲ್ಲಿ ಇವರ ಕಾರ್ಯಕ್ರಮವು ಬರುತ್ತಿರುತ್ತದೆ. ನಾಟಕಗಳು, ಹರಿಕಥೆಗಳು ಗಮಕ ಮತ್ತು ದಾಸಸಾಹಿತ್ಯವನ್ನು ಕುರಿತ ಪ್ರವಚನಗಳಿಂದ ಕನ್ನಡನಾಡಿನಲ್ಲಿ ಪ್ರಸಿದ್ಧರಾಗಿರುವವರು. ಒಳ್ಳೆ ವಾಗ್ಗೇಯಕಾರರು, ಗಮಕಿಗಳು. ಅವರು ನನ್ನ ಮಗಳ ಮಾವ ಈ ಕಾರಣದಿಂದ ಅವರ ಬಗ್ಗೆ ಹೆಚ್ಚು ಹೇಳಲು ಸಂಕೋಚವಾಗುತ್ತದೆ. ಅವರ ವಿಮರ್ಶಾತ್ಮಕ ದೃಷ್ಟಿಯು ಮತ್ತು ವ್ಯಾಸ ದಾಸಸಾಹಿತ್ಯದಲ್ಲಿರುವ ಆಳವಾದ ಜ್ಞಾನದ ಲಾಭವನ್ನು ಮಾತ್ರ ನಿಸ್ಸಂಕೋಚವಾಗಿ ಪಡೆದುಕೊಂಡಿದ್ದೇನೆ. ಅವರಿಗೆ ಕೃತಜ್ಞ.

ಈ ಕೃತಿಯು ಬೆಳಕು ಕಾಣಲು ತಿರುಪತಿ ದೇವಸ್ಥಾನದವರು ಒದಗಿಸಿದ ಧನಸಹಾಯವೂ ಮುಖ್ಯ ಕಾರಣ.

ಎರಡು ವರ್ಷಗಳ ಹಿಂದೆ ಅವರಿತ್ತ ಸಹಾಯಧನವು ಮುದ್ರಣವೆಚ್ಚ ಮತ್ತು ಗಗನಕ್ಕೇರಿರುವ ಕಾಗದದ ಬೆಲೆ ಇವುಗಳನ್ನು ಗಮನಿಸಿದಾಗ ಅಪರ್ಯಾಪ್ತವೆನಿಸಿದರೂ ಅದಿಲ್ಲದಿದ್ದರೆ ಈ ಕೃತಿ ಬೆಳಕು ಕಾಣುತ್ತಿರಲಿಲ್ಲವೆಂಬುದನ್ನು ಮರೆಯುವಂತಿಲ್ಲ. ಈ ಸಹಾಯಧನವನ್ನು ಕೊಟ್ಟ ಹಾಗೂ ದೊರಕಿಸಿಕೊಟ್ಟವರಿಗೆಲ್ಲ ಕೃತಜ್ಞನಾಗಿದ್ದೇನೆ.

ಇದನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟು ಸಹಕರಿಸಿದ ಕೇಸರಿ ಪ್ರೆಸ್ಸಿನ ವ್ಯವಸ್ಥಾಪಕರಾದ ಶ್ರೀ ನಂಜುಮಮ್ಮಯ್ಯರವರಿಗೆ ಕೃತಜ್ಞತೆಯನ್ನು ಸಲ್ಲಿಸಬೇಕಾದ್ದು ನನ್ನ ಕರ್ತವ್ಯ.

ಬೆಂಗಳೂರು
4-9-90

ಭಾರತೀ ರಮಣಾಚಾರ್ಯ

# ಸಮರ್ಪಣೆ



ಶ್ರೀ ಪೇಜಾವರ ಮಠಾಧೀಶರಾದ

ಪೂಜ್ಯ

**ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ**

**ಷಷ್ಠ್ಯಪೂರ್ತಿ ಮಹೋತ್ಸವ ಪ್ರಯುಕ್ತ**

ಶ್ರೀ ಚರಣಗಳಲ್ಲಿ

ಈ ಕಿರು ಕೃತಿಯನ್ನು

ಭಕ್ತ್ಯಾದರಪೂರ್ವಕ ಸಮರ್ಪಿಸಿದೆ.

# ವಿಷಯಾನುಕ್ರಮಣಿಕೆ




ತಿರುಪತಿ ತಿರುಮಲ ದೇವಸ್ಥಾನದವರಿತ್ತ

ಧನ ಸಹಾಯದಿಂದ ಪ್ರಕಟವಾದುದು

# ಕ ನ ಕ ದಾ ಸ ರು

**ಈಶ ನಿನ್ನ ಭಜನೆಯನ್ನು ಆಸೆಯಿಂದ ಮಾಡುವೇನು**
**ದೋಷರಾಶಿ ದೂರ ಮಾಡು ಶ್ರೀಶ ಕೇಶವ ||**

ದಾಸರು ದೂರದಿಂದಲೇ ತನ್ಮಯರಾಗಿ ತಮ್ಮ ತಂಬೂರಿಯನ್ನು ಮೀಟುತ್ತಾ ಹಾಡಿಕೊಂಡು ದೇವಸ್ಥಾನದ ಕಡೆಗೆ ಬಂದರು. ಹೊರ ಪ್ರಾಕಾರದಲ್ಲಿ ನಿಂತುಕೊಂಡರು, ವಿಮಾನ ವೆಂಕಟೇಶನಿಗೆ ಮತ್ತು ದಾಸರ ಕಟ್ಟೆಗೆ ಕೈ ಮುಗಿದರು. ತಮ್ಮ ಭಜನೆಯ ಲಯಕ್ಕೆ ತಕ್ಕಂತೆ ಎಡಕೈಯಲ್ಲಿ ಚಿಟಿಕಿ ಬಾರಿಸುತ್ತಿದ್ದರು. ಗೆಜ್ಜೆಯ ಕಾಲುಗಳು ಹಿಂದೆ ಮುಂದೆ ಲಯಬದ್ಧವಾಗಿ ಚಲಿಸುತ್ತಿದ್ದವು. ವಾತಾವರಣದಲ್ಲಿ ಭಕ್ತಿ ಭಾವ ತುಂಬಿತ್ತು. ಕೃಷ್ಣ ಮತ್ತು ಅನಿಲೇಶ, ಅಖಿಲೇಶ, ಅಶ್ವತ್ಥ ಇವರು ದಾಸರ ಜೊತೆಯಲ್ಲಿ ದೇವಸ್ಥಾನಕ್ಕೆ ಬಂದಿದ್ದರು. ಅವರು ದಾ ಸ ರು ಹೇಳಿಕೊಟ್ಟಿದ್ದನ್ನು ಹೇಳುತ್ತಿದ್ದರು.

ಅರ್ಕೇಶ, ಅಬ್ಜೇಶ, ಶ್ರೀಶ, ಗುರುಪ್ರಸಾದ ಮತ್ತು ವಿಜಯ ಎಲ್ಲರೂ ಒಬ್ಬೊಬ್ಬರಾಗಿ ಬಂದು ದಾಸರ ಭಜನೆಯಲ್ಲಿ ಸೇರಿಕೊಂಡರು.

ಸ್ಮಿತಾ ಮತ್ತು ಹರಿಪ್ರಿಯಾ ಮಾತನಾಡಿಕೊಂಡರು. "ಎಲ್ಲಿ ಕಾವೇರಿ ಮತ್ತು ಕುಸುಮ ?"

ದಾಸರಿಗೆ ಹರಿಪ್ರಿಯಳ ದನಿ ಕೇಳಿಸಿತು. ಕಣ್ತೆರದರು. ಸುತ್ತಲು ಹುಡುಗರ ಹುಡುಗಿಯರ ಗುಂಪು. ಅಷ್ಟರೊಳಗಾಗಿ ಕುಸುಮ ಮತ್ತು

ಕಾವೇರಿ ಬಂದರು. "ಎಲ್ಲಿಗೆ ಹೋಗಿದ್ದಿರಿ ? ದಾಸರು ಎಷ್ಟು ಚೆನ್ನಾಗಿ ಭಜನೆ ಮಾಡುತ್ತಿದ್ದರು ಗೊತ್ತಾ !" ಎಂದು ಸ್ಮಿತಾ ಕೇಳಿದಳು.

"ಅಮೃತ, ಸುಶೀಲಾ ಮತ್ತು ಉಷಾನ ಕರೆದುಕೊಂಡು ಬರಲು ಹೋಗಿದ್ದೆ. ಅಗೊ, ಅವರು ಅಲ್ಲಿ ಬರುತ್ತಿದ್ದಾರೆ !" ಎಂದಳು.

"ಯಾವ ಭಜನೆ ಹಾಡುತ್ತಿದ್ದರು ?" ಕಾವೇರಿ ಕೇಳಿದಳು.

"ಪರಮಾತ್ಮನ ಇಪ್ಪತ್ತುನಾಲ್ಕು ನಾಮಗಳನ್ನು ಹೇಳುವ 'ಈಶ ನಿನ್ನ' ಇಲ್ಲವೆ – ಅದನ್ನು" – ಸ್ಮಿತಾ ಹೇಳಿದಳು.

"ಸಂಧ್ಯಾವಂದನೆಯಲ್ಲಿ ಈ ಇಪ್ಪತ್ತುನಾಲ್ಕು ಹೆಸರು ಹೇಳುತ್ತಿರುತ್ತೇನೆ :– ಅಖಿಲೇಶ ಅಂದ.

"ನಿಜ ನನಗು ಬರುತ್ತೆ" ಕೇಶವ, ನಾರಾಯಣ, ಮಾಧವ........ ಪ್ರಾರಂಭಿಸಿದ ಹೇಳುವುದಕ್ಕೆ, ಅಶ್ವತ್ಥ.

"ಸರಿಯಪ್ಪ ಈ ಹೆಸರನ್ನು ಹೇಳುವಾಗ ಮನಸ್ಸಿನಲ್ಲಿ ಏನು ಪ್ರಾರ್ಥನೆ ಮಾಡಬೇಕು ಎಂಬುದನ್ನು ದಾಸರು ಇದರಲ್ಲಿ ವರ್ಣಿಸಿದ್ದಾರೆ – ಅಂದರು ದಾಸರು.

"ಇದನ್ನು ಮಾಡಿದವರು ಯಾರು ?" – ಸುಶೀಲೆ ಪ್ರಶ್ನಿಸಿದಳು.

"ಕನಕದಾಸರು" – ದಾಸರು ಹೇಳಿದರು.

"ಹೌದು 'ಆದಿಕೇಶವ' ಎಂದು ಕೊನೆಯಲ್ಲಿ ಬರುತ್ತಲ್ಲಾ" ಅರ್ಕೇಶ ಅಂದ.

"ಕನಕದಾಸರು ಯಾರು ?" ಗುರುಪ್ರಸಾದ ದಾಸರನ್ನು ಕೇಳಿದ

"ವಿಚಿತ್ರವಾಗಿದೆ ಹೆಸರು – ವಿಜಯದಾಸರು, ವೆಂಕಟದಾಸರು – ಪುರಂದರದಾಸರು – ನರಹರಿದಾಸರು ಎಂತೆಲ್ಲಾ ಕೇಳಿದ್ದೇವೆ ಕನಕ

ದಾಸರು ಎಂಬುದು ಹೆಸರು ವಿಚಿತ್ರ ಅಲ್ಲವೆ ? ಶ್ರೀಪತಿ ಆಶ್ಚರ್ಯ ಸೂಚಿಸಿದ.

"ನಾವು ಇವತ್ತು ಆ ಕನಕದಾಸರ ಪರಿಚಯವನ್ನೆ ಮಾಡಿಕೊಳ್ಳೋಣ. ಅವರಿಗೂ ಈ ತಿರುಪತಿ ತಿಮ್ಮಪ್ಪನಿಗು ಬಹಳ ನಂಟುಗಂಟು. ಅವರು ಶ್ರೀನಿವಾಸನ ಅಂತರಂಗ ಭಕ್ತರಾಗಿದ್ದರು. ಆದ್ದರಿಂದಲೇ ಶ್ರೀನಿವಾಸನ ವರದಿಂದ ಹುಟ್ಟಿ, ಶ್ರೀನಿವಾಸನ ಭಕ್ತರಾಗಿ, ಶ್ರೀನಿವಾಸನೊಡನೆ ಸರಸ ಮಾಡುವಷ್ಟು ಭಕ್ತಿಭಾವವನ್ನು ಮೈಗೂಡಿಸಿಕೊಂಡಿದ್ದರು." ದಾಸರ ಈ ಮಾತನ್ನು ಕೇಳಿ ಎಲ್ಲರು ಕುತೂಹಲದಿಂದ ಕೇಳುತ್ತಿದ್ದರು. ದಾಸರ ಮುಖವನ್ನೇ ನೋಡುತ್ತಾ ಕುಳಿತುಕೊಂಡರು. ದಾಸರು ಕುಳಿತುಕೊಂಡು ವಿಮಾನ ವೆಂಕಟರಮಣನಿಗೆ ಕೈ ಮುಗಿದರು.

"ದಾಸರೆ ! ಕನಕದಾಸರ ಕಾಲ ಯಾವುದು ?" ಶ್ರೀಪತಿ ಪ್ರಶ್ನೆಮಾಡಿದ.

"ನೋಡಪ್ಪ 15ನೇ ಶತಮಾನದ ಕೊನೆಯಲ್ಲಿ ಹುಟ್ಟಿ 16ನೇ ಶತಮಾನದ ಬಹಳಷ್ಟು ವರ್ಷಗಳವರೆಗೂ ಬಾಳಿ ಬದುಕಿದರೆಂದು ಹೇಳಬಹುದು".

"ಅದು ಹೇಗೆ ?" ಅಖಿಲೇಶ ಪ್ರಶ್ನಿಸಿದ.

"ನೋಡಪ್ಪ ಕನಕದಾಸರು ಹುಟ್ಟಿದ್ದು ಇಂಥ ದಿನ ಎಂದು ಹೇಳಲು ನಮಗೆ ಯಾವ ಖಚಿತ ಆಧಾರವು ಇಲ್ಲ . ...."

"ಮೋಹನ ತರಂಗಿಣಿಯಲ್ಲಿ ಆಧಾರ ಇದೆ ಅಂತ ಕೇಳಿದ್ದೇನೆ", ಕೃಷ್ಣ ಮಧ್ಯದಲ್ಲಿ ಬಾಯಿಹಾಕಿ ಹೇಳಿದ.

ನೀನು ಕೇಳಿದ್ದು ಸರಿಯೆ. ಅಲ್ಲಿ ಅನಿರುದ್ಧನ ಜನ್ಮ ಆನಂದ

ಸಂವತ್ಸರದ ಮಾಘಶುದ್ಧ ಪಂಚಮೀ ಆದಿವಾರ ಸೂರ್ಯೋದಯಕಾಲ ಸ್ವಾತಿನಕ್ಷತ್ರದಲ್ಲಾಯಿತು ಎಂಬ ಉಲ್ಲೇಖ ಇದೆ. ಇದರ ಮೇಲೆ ಲೆಕ್ಕಾಹಾಕಿ ಕೆಲವು ವಿದ್ವಾಂಸರು ಇಸ್ವಿ 1486–87 ರಲ್ಲಿ ಆನಂದ ಸಂವತ್ಸರವೆ ಇತ್ತು. ಆದ್ದರಿಂದ ಅದು ಕನಕದಾಸರ ಹುಟ್ಟಿದ ದಿನವೇ ಆಗಿರಬೇಕು ಅನ್ನುತ್ತಾರೆ.

"ಬರೇ ಆನಂದ ಸಂವತ್ಸರ ಇತ್ತು ಅನ್ನುವುದು ಊಹೆಗೆ ಆಧಾರ ವಾಗಲು ಹೇಗೆ ಸಾಧ್ಯ?" – ಅರವತ್ತು ವರ್ಷಕ್ಕೊಮ್ಮೆ ಆನಂದ ಸಂವತ್ಸರ ಬರುತ್ತಲೇ ಇರುತ್ತದೆ " ಶ್ರೀಪತಿ ಗೊಣಗಿದ.

"ಹೌದು ಶ್ರೀಪತಿ. ಪರೀಕ್ಷೆ ಮಾಡದೆ ಯಾವುದನ್ನು ಒಪ್ಪಿಕೊಳ್ಳ ಬಾರದು. ಅದಕ್ಕೆ ಬೇರೆ ಆಧಾರವು ಇದೆ" ದಾಸರ ಮಾತು ಮುಗಿಯುವು ದರೊಳಗಾಗಿಯೆ,

"ಏನು ಆಧಾರ – ವಿಸ್ತಾರವಾಗಿ ಹೇಳಿ" ಎಂದು ನಾಲ್ಕಾರು ದನಿಗಳು ಕೇಳಿದವು.

"ಭಲಾ, ಹುಡುಗರು ಎಂದರೆ ಹೀಗಿರಬೇಕು. ಹೊಸಸಂಗತಿಯುನ್ನು ತಿಳಿಯುುವ ಕುತೂಹಲ ಬಹಳ ಒಳ್ಳೆಯದು. ಸಾವಧಾನವಾಗಿ ಕೇಳಿ. ನಿಮ್ಮ ನಿಮ್ಮಲ್ಲೇ ಮಾತನಾಡಿಕೊಳ್ಳಬೇಡಿ. ಏನಾದರು ಹೇಳುವುದಿದ್ದರೆ ನೇರವಾಗಿ ನನ್ನೊಡನೆ ಹೇಳಿ. ನಿಂತುಕೊಂಡು ಹೇಳಿದರೆ ಎಲ್ಲರು ಕೇಳಿದಂತೆ ಆಗುತ್ತದೆ.

ಆಗ "ಕೃಷ್ಣ ಹೇಳುತ್ತಿದ್ದ" – ಅಬ್ಜೇಶ ನಿಂತು ಹೇಳಿದ.

"ಹಾಗಾದರೆ ನೀನು ಕುಳಿತುಕೊ. ಕೃಷ್ಣನೆ ಹೇಳಲಿ. ಏನಪ್ಪ ಕೃಷ್ಣ?"

ದಾಸರ ಮಾತಿಗೆ ಕೃಷ್ಣ ಎದ್ದುನಿಂತು ಹೇಳಿದ – "ಕನಕದಾಸರು

ವ್ಯಾಸರಾಯರ ಶಿಷ್ಯರು–ಪುರಂದರ ದಾಸರ ಸಮಕಾಲೀನರು."

"ನಿಜ" ದಾಸರು ಅನುಮೋದಿಸಿದರು.

"ಇದಕ್ಕೆ ಆಧಾರ ?" ಶ್ರೀಪತಿ ಪ್ರಶ್ನಿಸಿದ.

"ಕನಕದಾಸರ ಮೇಲೆ ದಯಮಾಡಲು ವ್ಯಾಸ..............." ಕೃಷ್ಣ ಹಾಡಿದ.

"ಭೇಷ್. ಇದು ಪುರಂದರದಾಸರ ಕೀರ್ತನೆ. ಕನಕದಾಸರ ಜೀವನದ ಒಂದು ಘಟನೆಗೆ ಸಂಬಂಧಿಸಿದ್ದು. ಇದರಿಂದ ಕನಕದಾಸರನ್ನು ಪುರಂದರದಾಸರು ಕಂಡದ್ದು ಹಾಗು ವ್ಯಾಸರಾಯರು ಅನುಗ್ರಹ ಮಾಡಿದ್ದು ಗೊತ್ತಾಗುತ್ತದೆ".

"ಇರಬಹುದು. ಇದರಿಂದ ಕನಕದಾಸರ ಕಾಲ ಹೇಳಿದಂತಾಯಿತೇ ?" ಶ್ರೀಪತಿ ಮತ್ತೆ ಪ್ರಶ್ನಿಸಿದ.

"ಇಲ್ಲ. ಆದರೂ ಇದು ಕಾಲ ನಿರ್ಣಯಕ್ಕೆ ಆಧಾರ. ಸಾವಧಾನವಾಗಿ ಕೇಳು – "ವ್ಯಾಸರಾಯರು ಕುಹುಯೋಗದಿಂದ ವಿಜಯನಗರದ ಸಾಮ್ರಾಟ್ ಕೃಷ್ಣರಾಯನನ್ನು ರಕ್ಷಿಸಿದರೆಂಬುದು ಇತಿಹಾಸ ಪ್ರಸಿದ್ಧ.

ಎಲ್ಲರೂ "ಹೌದು ಹೌದು".

"1521 ರಲ್ಲಿ ಈ ಘಟನೆ ನಡೆಯಿತಂತೆ ನಮ್ಮ ಉಪಾಧ್ಯಾಯರು ಹೇಳಿದ್ದರು" ಅನಿಲೇಶ ಹೇಳಿದ.

"ಅದು ಸರಿ. ಈ ಘಟನೆ ಆಸುಪಾಸಿನಲ್ಲೆ ವ್ಯಾಸರಾಯರು ದಾಸ ಕೂಟವನ್ನು ಸ್ಥಾಪಿಸಿರಬೇಕು. ಆಗ ಕನಕದಾಸರು, ಪುರಂದರದಾಸರು ಮೊದಲಾದವರು ಒಟ್ಟಿಗೆ ಸೇರಿರಬೇಕು. ಅಂದರೆ ಸಮಕಾಲೀನರಾದರು." ದಾಸರು ಹೇಳಿದರು.

"ಅಲ್ಲದೆ ಪುರಂದರದಾಸರು ನಿಧನರಾದುದು.... ..."

"ವೈಕುಂಠವಾಸಿಗಳಾದುದು" ಅನ್ನಬೇಕು. ಕೃಷ್ಣನ ಮಾತನ್ನು ಮೊಟಕುಗೊಳಿಸುತ್ತಾ ಅಖಿಲೇಶ ಬಾಯಿ ಹಾಕಿದ

"ಹಾಗೇ ಆಗಲಿ ವೈಕುಂಠವಾಸಿಗಳಾದುದ್ದು 1565ನೇ ಜನವರಿಯಲ್ಲಿ ಎಂದು ನಮ್ಮ ಮೇಷ್ಟ್ರು ಹೇಳಿದ್ದರು."

"ಆದಕ್ಕು 26 ವರ್ಷಮುಂಚೆ ವ್ಯಾಸರಾಯರು ವೃಂದಾವಸ್ಥರಾಗಿದ್ದ ರಂತೆ" ಸುಶೀಲೆ ಹೇಳಿದಳು.

"ನಿಜ ಅಮ್ಮ. ಕೃಷ್ಣ ಹೇಳಿದ್ದು ನೀನು ಹೇಳಿದ್ದು ಎಲ್ಲವನ್ನು ಒರೆ ಹಚ್ಚಿ ನೋಡಿದರೆ ತಿಳಿಯೋದಿಷ್ಟೆ – ಕನಕದಾಸರು 1486ರ ಆಸುಪಾಸಿನಲ್ಲಿ ಹುಟ್ಟಿದ್ದು 16ನೇ ಶತಮಾನದಲ್ಲಿ ಬಹುಕಾಲ ಜೀವಿಸಿದ್ದರು ಅಂತ ಸಂಗ್ರಹಿಸಿದರು.

"ಅವರು ಹುಟ್ಟಿದ್ದೆಲ್ಲಿ ?"

"ತಂದೆ ಯಾರು ?"

"ತಾಯಿ ಯಾರು ?"

"ನೋಡಿ, ನೋಡಿ ಹೀಗೆ ಒಟ್ಟಿಗೆ ಪ್ರಶ್ನೆಕೇಳಿದರೆ ಏನು ಹೇಳಲು ಸಾಧ್ಯ ?" ಒಂದೊಂದೇ ಪ್ರಶ್ನೆಯನ್ನು ಕೇಳಬೇಕು ಗೊತ್ತಾಯಿತೆ ? ದಾಸರು ಹುಡುಗರಿಗೆ ಎಚ್ಚರಿಕೆ ನೀಡಿದರು. ಮತ್ತು ಮಾತನ್ನು ಮುಂದು ವರಿಸಿ, ಈಗ ನಾನು ಮೊದಲು ಹೇಳುವುದನ್ನು ಕೇಳಿ. ಏನಾದರು ಹೇಳು ವುದಿದ್ದರೆ ನನ್ನೊಡನೆ ಅನಂತರ ಕೇಳಿ. ನೀವು ಪ್ರಶ್ನೆ ಹಾಕುವುದಾದರೆ ನನಗೆ ಪ್ರಶ್ನೆ ಹಾಕಬೇಕು ತಿಳಿಯಿತೆ ?" ಎಂದು ಸುಮ್ಮನೆ ಸ್ವಲ್ಪಹೊತ್ತು ಕುಳಿತು ಎಲ್ಲರನ್ನು ದೃಷ್ಟಿಸಿ ನೋಡಿದರು. ವಿನೀತರಾದ ಬಾಲ

ಬಾಲಕಿಯರು ದಾಸರು ಏನು ಹೇಳುವರೋ ಕೇಳಬೇಕೆಂಬ ಆತುರದಿಂದ ಸುಮ್ಮನೆ ಕುಳಿತಿದ್ದರು.

"ಕನಕದಾಸರು ಹುಟ್ಟಿದ್ದು ಕಾಗಿನೆಲೆಯಲ್ಲಿ. ಕೆಲವರು ಬಾಡಗ್ರಾಮದಲ್ಲಿ ಎಂದು ಹೇಳುತ್ತಾರೆ. ಈ ಎರಡು ಸ್ಥಾನಗಳನ್ನು ಬಹಳ ಆತ್ಮೀಯತೆಯಿಂದ ಕನಕದಾಸರು ತಮ್ಮ ಕೃತಿಗಳಲ್ಲಿ ಹೆಸರಿಸಿದ್ದಾರೆ. ಇವೆರಡೂ ಧಾರವಾಡ ಜಿಲ್ಲೆಯಲ್ಲಿವೆ.

"ಬಾಡ ಎಂಬುದು ಬಂಕಾಪುರದ ಸಮೀಪದಲ್ಲಿದೆ. ಆದಿಕೇಶವನ ಅಂಕಿತವನ್ನು ಕನಕದಾಸರು ಬಳಸಿದ್ದಾರೆ. ಇದನ್ನು ಬಿಟ್ಟರೆ ಬೇರಾವ ದಾಖಲೆ ಪುರಾವೆಗಳು ಕನಕದಾಸರ ಜನ್ಮ ಬಾಡದಲ್ಲಾಯಿತು ಎಂದು ಹೇಳಲು ಸಿಗುತ್ತಿಲ್ಲ. ಜನರ ನಂಬಿಕೆಯು ವ್ಯರ್ಥವಿರಲಾರದಲ್ಲ !"

"ಕಾಗಿನೆಲೆ – ಹಾವೇರಿ ರೈಲ್ವೆ ಸ್ಟೇಷನ್‌ನಿಂದ ಒಂಭತ್ತು ಮೈಲಿ ದೂರದಲ್ಲಿದೆ. ಅಲ್ಲಿ ಒಂದು ಹಳೇ ಊರು, ಇನ್ನೊಂದು ಹೊಸ ಊರು ಎಂದು ಎರಡು ಭಾಗಗಳಿವೆ. ಹಳೇ ಊರಿನಲ್ಲಿ ಎಲ್ಲಿ ನೋಡಿದರಲ್ಲಿ ಭಗ್ನಾವಶೇಷಗಳು ತುಂಬಿವೆ. ಒಂದಾನೊಂದು ಕಾಲಕ್ಕೆ ಅದೊಂದು ದೊಡ್ಡ ದುರ್ಗವಾಗಿತ್ತು. ಅಲ್ಲಿನ ಶಿಲಾಲೇಖಗಳಿಂದ ಅದರ ಚರಿತ್ರೆಯನ್ನು ಊಹಿಸಬಹುದು. ಇದು ಮೊದಲು ಪ್ರಸಿದ್ಧವಾದ ಬನವಾಸಿ ಪ್ರಾಂತಕ್ಕೆ ಸೇರಿತ್ತು. ಆಗ ಬನವಾಸಿಯನ್ನು ಕದಂಬರು ಆಳುತ್ತಿದ್ದರು. ಕದಂಬರಿಂದ ಚಾಲುಕ್ಯರು ಆದನ್ನು ಕಿತ್ತುಕೊಂಡರು. ಅನಂತರ ದೇವಗಿರಿಯ ಯಾದವರು ಅದನ್ನು ಗಿಟ್ಟಿಸಿಕೊಂಡರು. ಯಾದವರಿಂದ ಕಾಲುಚುರಿ ವಂಶಜರು ಇದನ್ನು ಗೆದ್ದುಕೊಂಡರು. 14ನೇ ಶತಮಾನದ ಹೊತ್ತಿಗೆ ಇದು ಬಹುಮನಿ ಸುಲ್ತಾನರ ವಶದಲ್ಲಿತ್ತು. ಅವರಿಂದ ಇದು ವಿಜಯನಗರದ ಸಾಮಂತರ ವಶವರ್ತಿಯಾಯಿತು. ವಿಜಯನಗರದ ಆಳ್ವಿಕೆಯ ದಿನಗಳಲ್ಲಿ ಕನಕದಾಸರು

ಬಾಡದಿಂದ ಆದಿಕೇಶವನ ಸುಂದರಮೂರ್ತಿಯನ್ನು ತಂದು ತಾವೇ ಕಟ್ಟಿಸಿದ್ದ ಮಂದಿರದಲ್ಲಿ ಪ್ರತಿಷ್ಠಾಪಿಸಿದರಂತೆ. ಮತ್ತು ಅಂದಿನಿಂದ ಕಾಗಿನೆಲೆಯಾದಿ ಕೇಶವ ಎಂಬ ಅಂಕಿತದಿಂದ ಕೀರ್ತನೆಗಳನ್ನು ರಚಿಸಿದ್ದರಂತೆ.

"ತಾಯಿಯ ಮಡಿಲಿನಲ್ಲಿ ಮಕ್ಕಳು ಹೇಗೋ ಹಾಗೆ ಪ್ರಕೃತಿಯ ಈ ಮಡಿಲಲ್ಲಿ ಈ ಕಾಗಿನೆಲೆ ಇದೆ. ಇದರ ಸೌಂದರ್ಯದ ವರ್ಣನೆಯನ್ನು ಮೋಹನತರಂಗಿಣಿಯಲ್ಲಿ ಮಾಡಿದ್ದಾರೆ. ಅಲ್ಲಿನ ಶಿಲಾಲೇಖನದಲ್ಲಿ ಈ ಸ್ಥಳದ ವರ್ಣನೆ ಬಹು ಚೆನ್ನಾಗಿ ಬಂದಿದೆ. ಚಾಲುಕ್ಯ ವಿಕ್ರಮಾಂಕನ ಶಿಲಾಲೇಖನದಲ್ಲಿ ಇದನ್ನು "ಶ್ರೀದೇವಿಯ ಆವಾಸಸ್ಥಾನವೆಂದು, ಕಬ್ಬಿಗರ ಬೀಡೆಂದು, ಕೀರ್ತಿಸಂಪನ್ನರ ನಾಡೆಂದು, ಸತ್ಪುರುಷರ ನಿವಾಸಸ್ಥಾನವೆಂದು, ಜಯವಧುವಿನ ಮಹಲ್ ಎಂದು ವರ್ಣಿಸಿದ್ದಾರೆ. ತ್ರಿಭುವನಮಲ್ಲ ಎಂಬುವನು ನಿಲ್ಲಿಸಿರುವ ಶಿಲಾಲೇಖನದಲ್ಲಿ 'ಮೂರು ಲೋಕದ ಸೌಂದರ್ಯ ಹೆಪ್ಪುಗಟ್ಟಿರುವ ನಾಡು' ಎಂದು ಹೇಳಲಾಗಿದೆ ಅಂದಮೇಲೆ ನೀವೇ ಊಹಿಸಿ - ಅದು ತನ್ನ ವೈಭವದ ದಿನಗಳಲ್ಲಿ ಹೇಗಿದ್ದಿರಬೇಕು ! ಈಗ ಪಾಳು ಗೊಂಪೆಯಾಗಿದೆ".

ಕಾಗಿನೆಲೆ ಧರ್ಮ ಸಂಸ್ಕೃತಿಗಳ ಸಂಗಮಸ್ಥಾನವಾಗಿದೆ ಎಂದು ಹೇಳಬಹುದು. ಅಲ್ಲಿರುವ ಲಕ್ಷ್ಮೀನರಸಿಂಹಸ್ವಾಮಿಯ ಮಂದಿರ ಮತ್ತು ಆದಿಕೇಶವನ ಮಂದಿರಗಳು ವಿಷ್ಣುಮಂದಿರಗಳು; ಕಾಳಹಸ್ತೇಶ್ವರ, ವೀರಭದ್ರೇಶ್ವರ, ಸೋಮೇಶ್ವರ, ಸಂಗಮೇಶ್ವರ ಹಾಗು ಬಸವಣ್ಣನ ಮಂದಿರಗಳು ಶೈವ ಮಂದಿರಗಳು ಅಲ್ಲದೆ ಅನೇಕ ಜೈನ ತೀರ್ಥಂಕರರ ಮೂರ್ತಿಗಳು ಈಗ ಒಡೆದು ಪಾಳುಬಿದ್ದಿದೆ ಅನ್ನಿ-ಹಿಂದೆ ಜೈನರು ಇಲ್ಲಿ ಸುಖವಾಗಿದ್ದರೆಂಬುದನ್ನು ಸಾರಿಹೇಳುತ್ತಿವೆ.

ಶ್ರೀಪತಿ ಎದ್ದುನಿಂತ, ದಾಸರು "ಏನಪ್ಪ ?" ಎಂದು ಕೇಳಿದರು

"ಅಲ್ಲಿ ಸಂಗಮೇಶ್ವರನ ದೇವಸ್ಥಾನದಲ್ಲಿ ಮುಸಲ್ಮಾನರು ಪೂಜೆ ಮಾಡುತ್ತಾರಂತೆ ಹೌದೆ ದಾಸರೆ ?" ಎಂದು ಕೇಳಿದ.

"ನಿಜ. ಅಲ್ಲಿ ಇಂದಿಗೂ ಮುಸಲ್ಮಾನರೇ ಪೂಜೆಮಾಡುತ್ತಾರೆ. ಕರ್ನಾಟಕದಲ್ಲಿ ಇದಕ್ಕೆ ನಿದರ್ಶನಗಳಿವೆ. ಇವು ಧರ್ಮಸಮನ್ವಯ ದೃಷ್ಟಿಯ ಕರ್ನಾಟಕದ ಔದಾರ್ಯಕ್ಕೆ ಜೀವಂತಸಾಕ್ಷಿಗಳಾಗಿವೆ. ಇಂತಹ ಉದಾಹರಣೆಗಳು "ಧರ್ಮಸ್ಥಳ" ಎಂಬ ಕ್ಷೇತ್ರದಲ್ಲಿ ಮಂಜುನಾಥೇಶ್ವರನನ್ನು ಪೂಜಿಸುವವರು ವೈಷ್ಣವರು, ವ್ಯವಸ್ಥಾಪಕರು ಜೈನರು. ಕಾಗಿನೆಲೆಯಲ್ಲಿ ಆದಿಕೇಶವನ ಪೂಜೆ ಮಾಡುವರು ಲಿಂಗವಂತರು. ಪ್ರಾಯಃ ಬಿಜಾಪುರದ ಸುಲ್ತಾನರ ಕಾಲದಲ್ಲಿ ಸಂಗಮೇಶ್ವರನ ಮಂದಿರದಲ್ಲಿ ಮುಸಲ್ಮಾನರ ಪೂಜೆ ಪ್ರಾರಂಭವಾಗಿರಬಹುದು."

"ಅಲ್ಲಿ ಫಕೀರ್‌ಸ್ವಾಮಿಯ ಮಠ ಇದೆಯಂತೆ ನಮ್ಮ ಅಜ್ಜ ಹೇಳುತ್ತಿದ್ದರು" ಹರಿಪ್ರಿಯ ಕುಳಿತಲ್ಲಿಯೇ ಮೆಲುದನಿಯಲ್ಲಿ ಹೇಳಿದಳು.

ದಾಸರಿಗೆ ಅದು ಕೇಳಿಸಿತು, "ನೋಡಮ್ಮ, ನೀನು ಎದ್ದುನಿಂತು ಹೇಳಿದ್ದರೆ ಎಲ್ಲರು ಕೇಳುತ್ತಿದ್ದರು. ನಾನು ಆಲಿಸುತ್ತಿದ್ದೆ. ಅಲ್ಲಿ ಫಕೀರ ಸ್ವಾಮಿಯ ಮಠ ಇದೆ ಅಂದೆಯಲ್ಲ ? ಅಲ್ಲಿಲ್ಲ. ಕಾಗಿನೆಲೆಯ ಹತ್ತಿರ ಶಿರಹಟ್ಟಿ ಎಂಬ ಗ್ರಾಮ ಇದೆ. ಅಲ್ಲಿ ಸೂಫಿ ಸಂಪ್ರದಾಯದ ಒಂದು ಗದ್ದುಗೆ ಇದೆ. ಅದನ್ನು ಫಕೀರಸ್ವಾಮಿಯ ಮಠ ಅಂತ ಕರೆಯುತ್ತಾರೆ." ದಾಸರು ಸ್ಪಷ್ಟಪಡಿಸಿದರು.

"ಕಾಗಿನೆಲೆಯ ಸಮೀಪದಲ್ಲೊಂದು ಬೆಟ್ಟ ಇದೆ. ನಮ್ಮ ವೆಂಕಟೇಶ್ವರನೇ ಅಲ್ಲಿಯ ದೇವಸ್ಥಾನದಲ್ಲೂ ಇದ್ದಾನೆ. ಇದನ್ನು ಕನಕದಾಸರ ತಂದೆ ಕಟ್ಟಿಸಿದ್ದಂತೆ". ದಾಸರು ಸ್ವಲ್ಪ ಸುಮ್ಮನಿದ್ದು ಮಾತನ್ನು ಮುಂದುವರಿಸುತ್ತಾ !

"ನೀವು ಕನಕದಾಸರ ತಂದೆ ಯಾರೆಂದು ಕೇಳಿದ್ದಿರಲ್ಲ? ಈಗ ಜ್ಞಾಪಕಕ್ಕೆ ಬಂತು. ಕನಕದಾಸರ ತಂದೆಯ ಹೆಸರು ಬೀರಪ್ಪನಾಯಕ. ನಾಯಕ ಅಂದರೆ ಸಣ್ಣ ಸೈನ್ಯದ ಅಧಿಕಾರಿ. ವಿಜಯನಗರ ಸಾಮ್ರಾಜ್ಯ ದಲ್ಲಿ ಸೇನಾಧಿಕಾರಿಗಳನ್ನು ಒಂದೊಂದು ದುರ್ಗದಲ್ಲೂ ನೇಮಿಸಿ ಅವರಿಗೆ ಅಲ್ಲಿಯ ಆಧಿಪತ್ಯದ ಹಕ್ಕನ್ನು ಕೊಟ್ಟಿರುತ್ತಿದ್ದರು. ಸುತ್ತಮುತ್ತಲ ಪ್ರಜೆಗಳ ರಕ್ಷಣೆಯನ್ನು ಮಾಡುತ್ತಾ ಪರಕೀಯರ ಧಾಳಿ ನಡೆಯದಂತೆ ಎಚ್ಚರದಿಂದ ಇದ್ದು, ಸಂದರ್ಭ ಒದಗಿದರೆ ಸೈನ್ಯದ ಕುಮ್ಮಕ್ಕನ್ನು ಪಡೆದು ಆಕ್ರಮಣವನ್ನು ಎದುರಿಸುತ್ತ ಅಲ್ಪಸ್ವಲ್ಪ ಕಪ್ಪಕಾಣಿಕೆಯನ್ನು ಸಾಮ್ರಾಟರಿಗೆ ಸಮರ್ಪಿಸಿ ಮಿಕ್ಕಂತೆ ಸ್ವತಂತ್ರ ಆಳ್ವಿಕೆ ನಡೆಸುವವರಾಗಿರು ತ್ತಿದ್ದರು. ಬೀರಪ್ಪನು ಅಂತ ಸೇನಾಧಿಕಾರಿ ಬಾಡ – ಹಾಗು ಕಾಗಿನೆಲೆಯ ಶಾಸಕನಾಗಿದ್ದ. ಅವನ ಹೆಂಡತಿ ಬಚ್ಚಮ್ಮ. ಆ ದಂಪತಿಗಳು ಕುರುಬರೆಂದು ಕೆಲವರು ಹೇಳಿದರೆ, "ಹಾಲುಮತಸ್ಥ" ರೆಂದು ಕೆಲವ ರೆನ್ನುತ್ತಾರೆ. ಬೆಟಗೆರೆ ಕೃಷ್ಣಶರ್ಮ ಎಂಬ ವಿದ್ವಾಂಸರು ಅವರನ್ನು "ಛತ್ರಿ" ಜಾತಿಯವರೆನ್ನುತ್ತಾರೆ. ಛತ್ರಿಜಾತಿಯವರು ಶ್ರೀ ವೈಷ್ಣವ ಸಂಪ್ರದಾಯದವರು. ನಮ್ಮ ವೆಂಕಟೇಶ್ವರಸ್ವಾಮಿ ಅವರ ಕುಲದೈವ.

"ಈ ದಂಪತಿಗಳಿಗೆ ರಾಜಮನ್ನಣೆ ದೊರೆತಿತ್ತು. ಪ್ರಜಾನುರಾಗವು ಲಭಿಸಿತ್ತು. ಮನೆಯಲ್ಲಿ ಸಾಕಷ್ಟು ಸಿರಿಸಂಪತಿತ್ತು. ಮಲ್ಲಯುದ್ಧದಲ್ಲಿ ಬೀರಪ್ಪನ ಸರಿಸಾಟಿ ಇಲ್ಲವೆಂದು ಜನ ಆಡಿಕೊಳ್ಳುತ್ತಿದ್ದರು. ಎಲ್ಲಾ ಸುಖ ಸೌಭಾಗ್ಯವಿದ್ದರೂ ಮಕ್ಕಳಿಲ್ಲ ಎಂಬ ಕೊರಗು ಆ ದಂಪತಿಗಳಿಗೆ. ಆದ್ದರಿಂದ ಅವರು ಒಳ್ಳೆಯ ಮಗನನ್ನು ಪಡೆಯಲು ತಿರುಪತಿ ತಿಮ್ಮಪ್ಪನನ್ನು ಮೊರೆಹೊಕ್ಕರು. ಇಲ್ಲಿ ಬಂದು ದೇವರನ್ನು ಪರಿಪರಿಯಾಗಿ ಸೇವಿಸಿದರು. ಕೊನೆಗೆ ದೇವರ ಕೃಪೆಯಿಂದ ಅವರಿಗೆ ಒಂದು

ಗಂಡುಮಗುವಾಯಿತು. ತಿಮ್ಮಪ್ಪನ ಪ್ರಸಾದದಿಂದ ಹುಟ್ಟಿದ್ದರಿಂದ ಮಗುವಿಗೆ 'ತಿಮ್ಮಪ್ಪ' ಎಂದು ಹೆಸರಿಟ್ಟರು."

ವಿಜಯ ಎದ್ದುನಿಂತ. ಎಲ್ಲರು ಆತನನ್ನು ನೋಡಿದರು ದಾಸರು "ಏನು ವಿಜಯ ? ಏನಾದರು ಕೇಳಬೇಕೋ, ಹೇಳಬೇಕೋ ?" ಎಂದು ಪ್ರಶ್ನಿಸಿದರು.

"ತಿಮ್ಮಪ್ಪ" ಅಂದರಲ್ಲ, ಹಾಗೆಂದರೇನರ್ಥ ?"

"ಭೇಷ್ ವಿಜಯ ! ಹಾಗೆ ತಿಳಿಯದಿದ್ದದ್ದನ್ನು ಕೇಳಬೇಕು" ದಾಸರು ಉತ್ತರಿಸುತ್ತಾ ಮುಂದುವರಿದರು.

"ತಿಮ್ಮಪ್ಪ' ಎಂಬ ಶಬ್ದ "ತಿರುಮಲೈಯಪ್ಪ" ಎಂಬ ತಮಿಳು ಶಬ್ದದ ಕನ್ನಡ ರೂಪ. ತಿರು ಅಂದರೆ ಶ್ರೀ—ಸಂಸ್ಕೃತದಲ್ಲಿ, ಮಲೈ ಎಂದರೆ ಬೆಟ್ಟ ಅಂತ. ಅಪ್ಪ ಎಂದರೆ ಸ್ವಾಮಿ ಅಥವಾ ಒಡೆಯ ಅಂತ. ಒಟ್ಟಿನಲ್ಲಿ ಬೆಟ್ಟದೊಡೆಯ ಅಂತ—ನಮ್ಮ ಸ್ವಾಮಿಗೆ ಇದು ಒಂದು ಹೆಸರು. ತಿಮ್ಮಪ್ಪ ಎಂದರು ಒಂದೆ, ಶ್ರೀನಿವಾಸ ಎಂದರು ಒಂದೆ, ವೆಂಕಟೇಶ ಎಂದರು ಒಂದೇ.

"ತಿಮ್ಮಪ್ಪ ಹುಟ್ಟಿದ ಮೇಲೆ ಬೀರಪ್ಪನಿಗೆ ವೆಂಕಟೇಶ್ವರನ ಭಕ್ತಿ ಮತ್ತಷ್ಟು ಹೆಚ್ಚಿತು. ಆಗ ಕಾಗಿನೆಲೆ ಸಮೀಪದ ಬೆಟ್ಟದ ಮೇಲೆ ದೇವಸ್ಥಾನವನ್ನು ಕಟ್ಟಿಸಿ ಬೆಟ್ಟದೊಡೆಯನ ಪೂಜೆ ನಿತ್ಯವು ಮಾಡತೊಡಗಿದ. ಇಂದಿಗು ಸಹ ಅವನ ವಂಶಜರೆ ಪೂಜೆ ಮಾಡುತ್ತಿದ್ದಾರೆ. 'ದಾಸ' ಎಂದು ತಮ್ಮನ್ನು ಕರೆದುಕೊಳ್ಳುತ್ತಾರೆ. ನಾವೆಲ್ಲರು ದಾಸರೇ. ಆತನೊಬ್ಬನೇ ಜಗದೊಡೆಯ, ಈಶ-ಅಲ್ಲವೆ ?" ದಾಸರು ಮುಗುಳ್ನಗೆ ನಕ್ಕರು.

"ಆದಿಕೇಶವನ ದೇವಸ್ಥಾನ ಕಟ್ಟಿಸಿದವರು ಯಾರು ?" ಎದ್ದುನಿಂತು ಅನಿಲೇಶ ಪ್ರಶ್ನಿಸಿದ.

"ಅದನ್ನು ಈಗಿರುವ ನರಸಿಂಹಸ್ವಾಮಿ ಗುಡಿಯ ಎಡಗಡೆ ಹಿಂದೆ ಕೊಂಡಪ್ಪ ವೆಂಕಟಪ್ಪ ಎಂಬುವರು ಕಟ್ಟಿಸಿದ್ದರಂತೆ. ಹದಿನಾರನೇ ಶತಮಾನದಲ್ಲಿ ಕನಕದಾಸರು ಅದನ್ನು ಜೀರ್ಣೋದ್ಧಾರ ಮಾಡಿಸಿದರಂತೆ. ಮತ್ತು ಬಾಡಾದಿಂದ ತಮ್ಮ ಇಷ್ಟದೇವನಾದ ಆದಿಕೇಶವನ ಸುಂದರ ಮೂರ್ತಿಯನ್ನು ತಂದು ಪ್ರತಿಷ್ಠಾಪನೆ ಮಾಡಿಸಿದರಂತೆ. ಆದಿಕೇಶವನ ಮೂರ್ತಿ ಸುಮಾರು ಹದಿನೆಂಟು ಅಂಗುಲ ಎತ್ತರ ಇದೆ." ಎರಡು ಕೈಗಳನ್ನು ಮೇಲೆ ಕೆಳಗೆ ಹಿಡಿದು ತೋರಿಸುತ್ತಾ ದಾಸರು ಮುಂದುವರಿಸಿದರು. "ಸುಂದರವಾದ ಶಿಲಾಮೂರ್ತಿ, ಅಂಥದೇ ಶಿಲೆಯಲ್ಲಿ ಕೆತ್ತಿರುವ ಸುಂದರವಾದ ಗರುಡ ಹಾಗು ಲಕ್ಷ್ಮೀದೇವಿಯ ಮೂರ್ತಿಗಳು ಅಲ್ಲಿವೆ."

"ದಾಸರೇ !" ಅಖಿಲೇಶ ಎದ್ದುನಿಂತ.

"ಏನಪ್ಪ ?"

"ಅಲ್ಲ, ಗರುಡನ ಮೂಗು ಏಕೆ ಅಷ್ಟು ಡೊಂಕಾಗಿರುತ್ತೆ ?"

ಎಲ್ಲರು ಗೊಳ್ಳನೆ ನಕ್ಕರು, ದಾಸರಿಗೂ ನಗುಬಂತು.

"ಲೇ ತುಂಟ, ಏನು ಕೇಳಿದ್ದು? ಮೂಗು ಏಕೆ ಡೊಂಕು ಅಂತಲೇ ಪುರಂದರದಾಸರು ಅದಕ್ಕೆ ಪ್ರಾರಬ್ಧ ಕಾರಣ ಎಂದಿದ್ದಾರಪ್ಪ. ಏನು ಪ್ರಾರಬ್ಧವೊ ನನಗೆ ಗೊತ್ತಿಲ್ಲ. ನನಗನ್ನಿಸುತ್ತೆ–ಯಾರಾದರೂ ಇನ್ನೊಬ್ಬರ ವಿಷಯದಲ್ಲಿ ತಲೆಹಾಕಿದರೆ ಮೂಗು ಡೊಂಕಾಗುತ್ತೆ ಅಂತ ತೋರಿಸುವುದಕ್ಕೆ ಹಾಗೆ ತನ್ನ ಮೂಗನ್ನು ಡೊಂಕು ಮಾಡಿಕೊಂಡಿದ್ದಾನೋ ಏನೋ – Don't Poke your nose into others affairs ಅನ್ನೋದಿಲ್ಲವೆ ಹಾಗೆ. ಹನುಮಂತ 'Don't wag your tail here' ಅಂದರೆ ಇಲ್ಲೆಲ್ಲಾ ನಿಮ್ಮ ಬಾಲಬಿಚ್ಚಬೇಡಿ ಎಂತ ತಿಳಿಸಲಿಕ್ಕೆ ತನ್ನ ಬಾಲ ಮೇಲಿಟ್ಟುಕೊಂಡು ನಿಂತಿರುವಂತೆ ಕಾಣಿಸುತಪ್ಪ" ಹಾಸ್ಯವಾಗಿ ಹೇಳಿದರು.

ದಾಸರ ಮಾತನ್ನು ಕೇಳಿ ಹುಡುಗರೆಲ್ಲ ಮತ್ತೆ ನಕ್ಕರು.

"ನೋಡಿ, ನರಸಿಂಹಸ್ವಾಮಿ ಮಂದಿರ ಹಾಗೂ ಆದಿಕೇಶವನ ಮಂದಿರದ ಸಮಾಚಾರ ಹೇಳುತ್ತಿದ್ದೆ ಅಲ್ಲವೆ.... ಆ ಮಂದಿರದ ಅಂಗಳದಲ್ಲಿ ಒಂದು ವಿಶಾಲವಾದ ಕಟ್ಟೆ ಇದೆ. ಇದನ್ನು ಕನಕದಾಸರ ಕಟ್ಟೆ ಎಂದು ಕರೆಯುತ್ತಾರೆ. ಇಲ್ಲೇ ಕುಳಿತು ಕನಕದಾಸರು ಕೀರ್ತನೆಗಳನ್ನು ಹಾಡುತ್ತಿದ್ದರಂತೆ."

* * *

"ತಿಮ್ಮಪ್ಪ, ಹೇಗೆ ಕನಕದಾಸ ಆದದ್ದು ? ತಿಮ್ಮಪ್ಪದಾಸ ಆಗಬೇಕಾಗಿತ್ತಲ್ಲವಾ?" — ಕಾವೇರಿ ಪಕ್ಕದಲ್ಲಿದ್ದ ಉಷಾನ ಕಿವಿಯಲ್ಲಿ ಗೊಣಗಿದಳು.

"ಏನಮ್ಮ ಕಾವೇರಿ, ಅದೇನು ಹೇಳುತ್ತಿದ್ದೆಯಲ್ಲ? ಹಾಗೆಲ್ಲ ನೀವು ನೀವೇ ಮಾತನಾಡಿಕೊಳ್ಳಬೇಡಿ. ಎದ್ದುನಿಂತು ಕೇಳಿದರೆ ಎಲ್ಲರೂ ಕೇಳುತ್ತೇವೆ."

"ತಿಮ್ಮಪ್ಪ ತಿಮ್ಮಪ್ಪದಾಸ ಆಗಬೇಕಿತ್ತು, ಕನಕದಾಸ ಆದದ್ದು ಏಕೆ ? ಅಂತ ಕೇಳಿದಳು ಅಷ್ಟೆ" –ಸುಶೀಲೆ ಎದ್ದು ನಿಂತು ಹೇಳಿದಳು.

"ನೋಡಿದಿರ, ಎಷ್ಟು ಒಳ್ಳೊಳ್ಳೆ ಪ್ರಶ್ನೆ ಹಾಕುತ್ತೀರಿ ! ನಿಮ್ಮ ನಿಮ್ಮಲ್ಲೇ ವಿಚಾರ ಮಾಡಿಕೊಂಡಾಗ ನಮಗೆ ಏನೋ ಅನ್ನಿಸಿಬಿಡುತ್ತೆ. ಹೋಗಲಿ ಬಿಡಿ. ಇನ್ನು ಹಾಗೆ ಮಾಡಬೇಡಿ. ತಿಮ್ಮಪ್ಪನ ಬಾಲ್ಯ – ಅವನು ಕನಕದಾಸ ಆದದ್ದು ಎಲ್ಲವನ್ನು ಹೇಳುತ್ತೇನೆ. ಕೇಳಿ.

"ತಿಮ್ಮಪ್ಪ ಬೀರಪ್ಪನಾಯಕನಿಗೆ ಮಾತ್ರ ಅಲ್ಲ, ಇಡೀ ಕಾಗಿನೆಲೆ ದುರ್ಗದ ಎಲ್ಲರ ಪ್ರೀತಿಗೂ ಪಾತ್ರನಾಗಿದ್ದ. ಒಳ್ಳೆಯ ಹುಡುಗ, ದಷ್ಟಪುಷ್ಟ ದೇಹ ಅವನಿಗೆ ಚಿಕ್ಕಂದಿನಿಂದಲೂ ಬೇಟೆ ಆಡುವುದು, ಬಾಣ

ಹೊಡೆಯುವುದು, ಕುಸ್ತಿ ಮಾಡುವುದು ಅಂದರೆ ಆಸೆ. ಈ ಕಾರಣದಿಂದಾಗಿ ಬೀರಪ್ಪನಾಯಕನ ಸೈನಿಕರಿಗೂ ಮೆಚ್ಚಿನ ಮಗುವಾಗಿದ್ದ.

"ಬೀರಪ್ಪ ಸ್ವರ್ಗಸ್ಥನಾದಾಗ ತಿಮ್ಮಪ್ಪನಿಗೆ ಇನ್ನು ಎಂಟು ವರ್ಷವಾಗಿತ್ತು, ಅಷ್ಟೇ. ಅವನ ತಾಯಿ ಬಚ್ಚಮ್ಮ ಬಲುಜಾಣೆ, ದಕ್ಷೆ. ದುರ್ಗ ಆಡಳಿತವನ್ನು ತಾನೇ ವಹಿಸಿಕೊಂಡಳು. ಅವಳು ತನ್ನ ಅಧೀನದಲ್ಲಿರಬೇಕಾದ ಒಂದಂಗುಲ ಭೂಮಿಯೂ ಪರರ ಕೈಸೇರದಂತೆ ಎಚ್ಚರವಹಿಸಿದ್ದಳು. ಒಂದು ಪುಡಿಗಾಸು ಬಾಕಿ ನಿಲ್ಲದಂತೆ ಕಂದಾಯವನ್ನು ವಸೂಲು ಮಾಡುತ್ತಿದ್ದಳು. ಜನ ತಲೆದೂಗುವಂತೆ ಗ್ರಾಮೀಣರ ವ್ಯಾಜ್ಯಗಳನ್ನು ಬಗೆಹರಿಸುತ್ತಿದ್ದಳು. ಜನರನ್ನು ಅಚ್ಚುಮೆಚ್ಚಿನಿಂದ ನೋಡಿಕೊಳ್ಳುತ್ತಿದ್ದಳು. ಮನೆಯಲ್ಲಿ ಮಗನಿಗೆ ಯೋಗ್ಯ ಶಿಕ್ಷಣವನ್ನು ಕೊಡಿಸುತ್ತಿದ್ದಳು ಮಗ ಕೇವಲ ಕುಸ್ತಿಪಟು ಆದರೆ ಸಾಲದು – ಆಗ ಹೆಚ್ಚೆಂದರೆ ದೊಡ್ಡ ಸೈನಿಕನಾಗಬಹುದು, ಅವನು ಒಳ್ಳೆಯ ವಿದ್ವಾಂಸನೂ ಆಗಬೇಕೆಂದು ಅವಳ ಅಭಿಪ್ರಾಯವಿತ್ತು. ಅದಕ್ಕೆ ತಕ್ಕಂತೆ ತಜ್ಞರಿಂದ ಪಾಠ ಹೇಳಿಸಿದಳು. ಆದ್ದರಿಂದಲೆ ಸಂಸ್ಕೃತ ಹಾಗು ಕನ್ನಡ ಭಾಷೆಯ ಸಾಹಿತ್ಯವನ್ನು ತಿಮ್ಮಪ್ಪ ಕಲಿತಿದ್ದ. ಭಾರತ, ಭಾಗವತ, ರಾಮಾಯಣ ಮುಂತಾದ ಪುರಾಣೇತಿಹಾಸಗಳು ಮಾತ್ರವಲ್ಲ ತರ್ಕ ವ್ಯಾಕರಣಾದಿ ಶಾಸ್ತ್ರ ಗ್ರಂಥಗಳನ್ನು, ಸಂಗೀತವನ್ನು ಚೆನ್ನಾಗಿ ಕಲಿತಿದ್ದ. ಆದರೆ ಹೆಚ್ಚಾಗಿ ಒಲವು ಇದ್ದದ್ದು ಸೈನಿಕ ಕವಾಯತ್‌ನಲ್ಲಿ ಮತ್ತು ಅಸ್ತ್ರಶಸ್ತ್ರಗಳನ್ನು ಕಲಿಯುವಲ್ಲಿ, ಮಲ್ಲಯುದ್ಧದಲ್ಲಿ. ಇದರಿಂದ ಅವನ ತಾಯಿ ಬಚ್ಚಮ್ಮ 'ಈ ನನ್ನ ಕಂದ ಹೇಗೆ ತಂದೆಗೆ ತಕ್ಕ ಮಗನಾಗಿ, ವಂಶದ ಕೀರ್ತಿಯನ್ನು ಕಾಪಾಡುವವನಾಗುವನೋ' ಎಂದು ಸದಾ ಯೋಚಿಸುತ್ತಿದ್ದಳು. ಮೇಧಾವಿಯಾದ ತಿಮ್ಮಪ್ಪ ನಾಯಕನಿಗೆ ಸಕಲ ವಿದ್ಯೆಗಳು ಅನಾಯಾಸವಾಗಿ ಕರಗತವಾಗಿದ್ದವು.

"ಈ ತಿಮ್ಮಪ್ಪನಾಯಕ ಕನಕನಾಯಕನಾದುದು ಒಂದು ಸೋಜಿಗದ ಸಂಗತಿ. ಒಮ್ಮೆ ತಿಮ್ಮಪ್ಪನಾಯಕನಿಗೆ ಕೊಪ್ಪರಿಗೆ ತುಂಬ ಯಾರೋ ಹೊತಿಟ್ಟಿದ್ದ ಚಿನ್ನ ಸಿಕ್ಕಿತಂತೆ–ಬಾಡದಲ್ಲಿ. ಚಿನ್ನಕ್ಕೆ ಕನಕ ಅಂತಲೂ ಕರೆಯುತ್ತಾರಲ್ಲ. ಆದ್ದರಿಂದಲೇ ಜನ 'ಕನಕನಾಯಕ' ಎಂದು ತಿಮ್ಮಪ್ಪನಾಯಕನನ್ನು ಕರೆಯತೊಡಗಿದರು.

"ದೇವರು ನಮಗೆ ಐಶ್ವರ್ಯ, ಅಧಿಕಾರ, ವಿದ್ಯೆ ಎಲ್ಲ ಸೌಖ್ಯಗಳನ್ನೂ ಕೊಟ್ಟು ಪರೀಕ್ಷೆ ಮಾಡುತ್ತಾನೆ. ಒಮ್ಮೊಮ್ಮೆ ತಿಂದರೂ ಕೂಳು ಹುಟ್ಟಬಾರದು ಹಾಗೆ ಇದ್ದುದ್ದನ್ನು ಕಿತ್ತುಕೊಂಡು ಕಷ್ಟದ ಮೇಲೆ ಕಷ್ಟ ಕೊಟ್ಟು ಪರೀಕ್ಷೆ ಮಾಡುತ್ತಾನೆ. ಕನಕನಾಯಕನ ಪರೀಕ್ಷೆ ಈಗ ಮೊದಲ ರೀತಿಯಲ್ಲಿ ಪ್ರಾರಂಭವಾಯಿತು ಅಪಾರ ಐಶ್ವರ್ಯ, ಅಧಿಕಾರ, ದೇಹ ದಾರ್ಢ್ಯ. ಮೇಲಾಗಿ ಮನೆಯಲ್ಲಿ ತನ್ನದೇ ಸರ್ವಾಧಿಕಾರ. ಹೀಗಿದ್ದಾಗ್ಯೂ ತಿಮ್ಮಪ್ಪನ ತಲೆತಿರುಗಲಿಲ್ಲ. ಅವನು ಅಹಂಕಾರಿಯಾಗಲಿಲ್ಲ. ತಪ್ಪುದಾರಿ ಹಿಡಿಯಲಿಲ್ಲ. ಸ್ವಭಾವತಃ ಗುಣಾಢ್ಯ ಇದ್ದ. ಆದ್ದರಿಂದ ಧನಾಢ್ಯನಾದದ್ದು ಆತನಿಗೆ ಶ್ರೇಯಸ್ಸಿಗೆ ಕಾರಣವಾಯಿತು. ಹಿರಿಯರ ಸಲಹೆಯನ್ನು ಪಡೆದು ಜನಹಿತ ಸಾಧನೆಯಲ್ಲಿ, ದೇವರ ಸೇವೆಯಲ್ಲಿ ಆ ನಿಧಿಯನ್ನು ಖರ್ಚುಮಾಡಿದ. ಕಾಗಿನೆಲೆಯ ಮಂದಿರವನ್ನು ಜೀರ್ಣೋದ್ಧಾರ ಮಾಡಿಸಿದ. ತನ್ನ ಆರಾಧ್ಯದೈವ ಆದಿಕೇಶವನನ್ನು ಅಲ್ಲಿ ಸ್ಥಾಪಿಸಿದ. ತಿರುಪತಿಯಲ್ಲಿ ನಡೆಯುವ ಭಗವತ್ ಕೈಂಕರ್ಯದ ವಿವರವನ್ನು ಕೇಳಿದ್ದ. ಅಲ್ಲಿಯೂ ಕೂಡ ಕೇಶವನಿಗೆ ಅದೇ ಬಗೆಯಲ್ಲಿ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವಾದಿ ನಡಿಯುವಂತೆ ವ್ಯವಸ್ಥೆ ಮಾಡಿದ. ಜನ ತಿರುಪತಿಗೆ ಹೇಗೆ ಹೋಗುತ್ತಿದ್ದರೋ ಹಾಗೇ ಕಾಗಿನೆಲೆಗೇ ಬರತೊಡಗಿದರು. ನಮ್ಮ

ಶ್ರೀನಿವಾಸ ಕನಕನಾಯಕನ ಜನಹಿತಸಾಧನೆಯ ಕಾರ್ಯಕ್ಕೆ ಮೆಚ್ಚಿ ಕಾಗಿನೆಲೆಯಲ್ಲಿ ಕೇಶವನಾಗಿ ನಿಂತುಬಿಟ್ಟ.

"ಹೀಗೆ ದೈವಾನುಗ್ರಹಕ್ಕೆ ಪಾತ್ರನಾದ ಕನಕನಾಯಕನ ಮೇಲೆ ರಾಜದೃಷ್ಟಿಯೂ ಬಿತ್ತು. ವಿಜಯನಗರದ ಸಾಮ್ರಾಟರು ಆತನನ್ನು ಕಾಗಿನೆಲೆಯ ಕಿಲ್ಲೆದಾರನನ್ನಾಗಿ ಮೊದಲು ನೇಮಿಸಿದರು. ಕೆಲವೇ ದಿನಗಳಲ್ಲಿ ಬಂಕಾಪುರದ ಆಡಳಿತವೂ ಕನಕನಾಯಕನಿಗೆ ಸೇರಿತು.

"ಅಷ್ಟು ಪ್ರಸಿದ್ಧನಾದ ಕನಕನಾಯಕನಿಗೆ ಹೆಣ್ಣುಕೊಡಲು ನಾ ಮುಂದು, ತಾ ಮುಂದು ಎಂದು ಬರುವುದು ಸಹಜ. ಬಚ್ಚಮ್ಮ ಯೋಗ್ಯ ಮನೆತನದಿಂದ ಸದ್ಗುಣಭರಿತಳಾದ ಹೆಣ್ಣನ್ನು ತಂದು ಮದುವೆ ಮಾಡಿದಳು.

"ಒಂದೆಡೆ ಸದ್ಗುಣಗಳು, ದೈವಭಕ್ತಿ, ಸಾಹಿತ್ಯಾಭಿರುಚಿ, ಸಂಗೀತ ಮುಂತಾದ ಕಲೆಗಳಲ್ಲಿ ಆಸಕ್ತಿ. ಇನ್ನೊಂದೆಡೆ ಬೇಟೆ, ಕುಸ್ತಿ, ಯುದ್ಧ ಮಾಡಿ ರಟ್ಟೆಯಬಲ ತೋರಿಸಬೇಕೆಂಬ ಹಂಬಲ. ಸಂಸಾರಲೋಲುಪತೆಯೂ ಕಡಿಮೆ ಇರಲಿಲ್ಲ. ಎಷ್ಟೆಷ್ಟು ಸುಖವನ್ನು ಅನುಭವಿಸಿದರೂ ಸುಖ ಮತ್ತಷ್ಟು ಬೇಕೆಂಬ ಬಯಕೆ ಬೆಳೆಯುತ್ತದಲ್ಲವೆ ? ಕನಕನಾಯಕನಿಗೂ ಅದೇ ಜಾಡ್ಯ ಹಿಡಿಯಿತು. ಸ್ವತಃ ಭಗವಂತನೇ ಸ್ವಪ್ನದಲ್ಲಿ ಬಂದು ಎಚ್ಚರಿಸಿ, "ಕನಕ ನನ್ನ ದಾಸನಾಗೋ, ಸಾಕು ಈ ಸಂಸಾರ" ಎಂದು ಕರೆದನಂತೆ.

"ನಿಜವಾ ?" ನಾಲ್ಕಾರು ಧ್ವನಿಗಳು ಏಕಕಾಲದಲ್ಲಿ ಕೇಳಿಬಂತು.

"ನಿಜ ಅಪ್ಪ ನಿಜ, ದೇವರು ತನ್ನ ಭಕ್ತರ ಉದ್ಧಾರಕ್ಕಾಗಿ ಹೀಗೆಲ್ಲಾ ಭಕ್ತರಿಗೆ ದರ್ಶನಕೊಟ್ಟು ಎಚ್ಚರಿಸುತ್ತಾನೆ."

"ಕನಕನಾಯಕ ದಾಸನಾಗಿ ಬಿಟ್ಟನಾ ?" ಅಶ್ವತ್ಥ ಕೇಳಿದ.

ಇಲ್ಲ. ಆಗಲಿಲ್ಲ. 'ನಿನ್ನ ದಾಸ ಏಕಾಗಬೇಕು?' ಅಂತ ಆ ಸ್ವಾಮಿಯನ್ನೇ ಕೇಳಿದ. ಮತ್ತು 'ನನಗೆ ದಾಸನಾಗಿ ತಿರಿದು ತಿಂಬುವುದು ಇಷ್ಟವಿಲ್ಲ' ಅಂದುಬಿಟ್ಟ."

"ಆಮೇಲೆ ?" — ಯಾರೊ ಪ್ರಶ್ನೆ ಕೇಳಿದರು.

"ಆಮೇಲೇನು — ಕೇಶವ ಯೋಚಿಸಿದ, 'ದಂಡಂ ದಶಗುಣಂ ಭವೇತ್' ಎಂದು."

"ಅಂದರೆ ಚೆನ್ನಾಗಿ ಹೊಡೆದುಬಿಟ್ಟ ಅಂತಲೆ ದಾಸರೆ !"– ವಿಜಯ ಕೇಳಿದ.

"ಹೌದಪ್ಪ. ದೇವತೆಗಳು ಹೊಡೆಯುವುದು ಎಂದರೆ ದನಕಾಯುವ ಹುಡುಗ ದನಗಳನ್ನು ಹೊಡೆದಂತಲ್ಲ, ಅವರು ಪ್ರತ್ಯಕ್ಷವಾಗಿ ಹೊಡೆಯುವುದಿಲ್ಲ. ಅಂತಹ ಸಂದರ್ಭವನ್ನು ಉಂಟುಮಾಡುತ್ತಾರೆ. ಮೊದಲು ಆತನ ಹೆಂಡತಿ ತೀರಿಕೊಂಡಳು. ಅನಂತರ ಆತನನ್ನು ಸಾಕಿ ಸಲಹಿದ ತಾಯಿ ಸ್ವರ್ಗಸ್ಥಳಾದಳು. ಇದರಿಂದ ಜೀವನದ ಉಲ್ಲಾಸದ ಸೆಲೆ ಬತ್ತಿಹೋಯಿತು. ಕನಕನಾಯಕನಿಗೆ ಬಾಳು ಬಿಕೊ ಅಂದಿತು"

"ಆಗ ವೈರಾಗ್ಯ ಬಂತು ಅಂತ ಕಾಣಿಸುತ್ತೆ ಅಲ್ಲವೆ ?" ಸುಶೀಲೆ ಎದ್ದುನಿಂತು ಕೇಳಿದಳು.

"ಹೌದಮ್ಮ, ಬರಬೇಕಾಗಿತ್ತು. ಆದರೆ ಬರಲಿಲ್ಲ ಅವನು ಶಿಕಾರಿ ಮಾಡೋದು ಬಿಟ್ಟಿದ್ದರೂ. ರಾಜಕಾರಣದಿಂದ ಉದಾಶೀನನಾಗುತ್ತಿದ್ದರೂ, ಮನಸ್ಸು 'ದಾಸ'ನಾಗುವಷ್ಟು ಹದವಾಗಿರಲಿಲ್ಲ. ಒಮ್ಮೊಮ್ಮೆ ಕೇಶವನ ಹೆಸರು ಹೇಳುತ್ತಾ ನಿಟ್ಟುಸಿರು ಬಿಡುತ್ತಿದ್ದ ಅಷ್ಟೆ. ಆದರೆ ದೀಕ್ಷೆ ತೆಗೆದುಕೊಳ್ಳಲು ಸಿದ್ಧನಿರಲಿಲ್ಲ.

"ಒಮ್ಮೆ ವಿಜಯನಗರದ ಪ್ರಭುಗಳ ವಿರುದ್ಧ ಕೆಲವರು ಬಂಡೇಳತೊಡಗಿದರು. ಅವರನ್ನು ಹತ್ತಿಕ್ಕಲು ಕನಕನಾಯಕನಿಗೆ ಆದೇಶ ನೀಡಲಾಯಿತು. ಮೊದಲೇ ತೋಳಬಲದ ಅಭಿಮಾನಿ ಕನಕನಾಯಕ-ಯುದ್ಧ ಘೋಷಿಸಿ ಎದುರಾಳಿಗಳನ್ನು ಸದೆ ಬಡಿಯಲು ಯತ್ನಿಸಿದ. ಆದರೆ ಎದುರಾಳಿಗಳ ಸಂಖ್ಯೆ ಅಧಿಕವಾಗಿತ್ತು. ಹೊಡೆತ ತಿಂದ. ಹೆಣಗಳ ಮಧ್ಯೆ ನೆಲಕ್ಕೊರಗಿ ಬಿದ್ದ. ಗಜೇಂದ್ರನನ್ನು ಬಿಟ್ಟು ಅವನ ಜೊತೆಯ ಆನೆಗಳು ಹೊರಟುಹೋದಂತೆ ಘಾಯಗೊಂಡು ನರಳುತ್ತಾ ಬಿದ್ದಿದ್ದ ಕನಕ ನಾಯಕನನ್ನು ಅಲ್ಲಿಯೆ ಮರೆತು ಅವನ ಅನುಯಾಯಿ ಸೈನಿಕರು ಓಡಿಹೋದರು.

"ನರಳುತ್ತಾ, ಹೊರಳುತ್ತ ಇದ್ದ ಕನಕನಾಯಕನ ಬಳಿಗೆ ಯಾರೋ ಅಪರಿಚಿತ ವ್ಯಕ್ತಿ ಬಂದನಂತೆ...."

"ಶತ್ರು ಸೈನಿಕನೇ ದಾಸರೇ ?"-ಅಖಿಲೇಶ ಪ್ರಶ್ನಿಸಿದ.

"ನಿನ್ನ ಕುತೂಹಲ ಸರಿ. ಆದರೆ ಅವನು ಶತ್ರುವಲ್ಲ ... ಮಿತ್ರರ ಮಿತ್ರ. ಎಲ್ಲರಲ್ಲೂ ಇರುವ ಕೇಶವನೇ ಅವನ ಬಳಿ ಬಂದಿದ್ದ. ಬಂದು ಘಾಯಗಳನ್ನು ತೋರಿಸುತ್ತಾ

'ಕನಕ! ಇನ್ನೂ ಈ ದೇಹದ ಮೇಲೆ ಅಭಿಮಾನ ಇದೆಯೆ ? ಈ ನಿನ್ನ ಶಕ್ತಿ ಸಾಮರ್ಥ್ಯದ ಹಮ್ಮು ಉಳಿದಿದೆಯೆ ?' ಎಂದು ಕೇಳಿದ

"ಕನಕನಾಯಕ ಕೇಳಿದ—'ನೀನು ಯಾರು ?'

" 'ಏಕೆ ನನ್ನ ಗುರುತು ಸಿಗಲಿಲ್ಲವೆ ?- ಈಗಲಾದರೂ ನನ್ನ ದಾಸನಾಗುವೆಯೊ ?' "

" 'ನೀನು ಯಾರು ? ನನ್ನಂತೆ ಒಬ್ಬ ಮನುಷ್ಯನಾಗಿ ಕಾಣಿಸುತ್ತಿರುವೆ. ದಾಸನಾಗಲು ಹೇಳುತ್ತೀಯೆ, ನಾನೇಕೆ ನಿನ್ನ ದಾಸನಾಗಬೇಕು '? ಎಂದು ಕನಕನಾಯಕ ಕೇಳಿದ.

" 'ಇನ್ನೂ ರಾಜ್ಯಕೋಶಗಳ ವ್ಯಾಮೋಹಬಿಟ್ಟು ತೊಲಗಿಲ್ಲವೇ ? ನೋಡು ! ನನ್ನ ದಾಸನಾಗು,........'

" 'ನೀನೇನು ಆದಿಕೇಶವನೇ ? ಈ ದೇಹ ಈಗಲೇ ಜರ್ಜರಿತವಾಗಿ ಹೋಗಿದೆ. ನಿನ್ನ ದಾಸನಾಗಿ ನಾನೇನು ಮಾಡಲಾದೀತು ? ಮೊದಲು ಜೀವ ಉಳಿಯಲಿ. ಆಮೇಲೆ ಬದುಕಿದ್ದರೆ, ನೋಡೋಣ'

" 'ಬದುಕಬೇಕೆ ?" ಹೀಗೆನ್ನುತ್ತಾ ಮುಗುಳ್ನಗೆ ಸೂಸುತ್ತಾ ಆ ವ್ಯಕ್ತಿ ಕನಕನಾಯಕನ ಶರೀರವನ್ನು ಮುಟ್ಟಿದ. ಆ ದಿವ್ಯ ಸ್ಪರ್ಶದಿಂದ ದೇಹ ಪುಳಕಿತವಾಯಿತು. ಘಾಯಗಳೆಲ್ಲವು ಅಳಿದುಹೋದವು. ಮೊದಲಿನಂತೆ ಕನಕನಾಯಕ ಎದ್ದುನಿಂತ. ಕೈ ಜೋಡಿಸಿದ. ಎದುರಿಗಿದ್ದ ವ್ಯಕ್ತಿಯ ಕಾಲು ಹಿಡಿದುಕೊಳ್ಳಲು ಬಗ್ಗಿದ. 'ಪ್ರಭು! ಸರ್ವಾಪರಾಧವನ್ನು ಸಹಿಸಿ ಕೃಪೆಮಾಡಲು ಬಂದಿರುವೆಯಾ ? ನಾನು ದಾಸನಾದ್ದರಿಂದ ನಿನಗೇನು ಪ್ರಯೋಜನ ?' ಎಂದು ಕೇಳಿದ.

" 'ನೀನು ನನಗೆ ಬೇಕಾದವನು, ನನ್ನ ದಾಸನೇ ನೀನು'

" 'ಆದರೂ ಒಂದು ಶರತ್ತನ್ನು ಒಪ್ಪಿಕೊಳ್ಳುವಿಯಾ ?'

" 'ಏನು ಕನಕ ?' ಮುಗುಳ್ನಗೆ ಸಹಿತ ಸ್ವಾಮಿ ಕೇಳಿದ.

" 'ನಾನು ಬಯಸಿದಾಗ ನಿನ್ನ ದರ್ಶನ ಭಾಗ್ಯವನ್ನು ಕರುಣಿಸಬೇಕು.'

" 'ಆಗಲಿ'

" 'ಹಾಗಾದರೆ ನೀನು ಈ ಮಾಯಾಪಾತ್ರವನ್ನು ಬಿಡು. ನಿನ್ನ ನಿಜರೂಪವನ್ನು ತೋರು.'

"ಮರುಕ್ಷಣದಲ್ಲಿ ಕನಕನಾಯಕನು ಶಂಖಚಕ್ರಗದಾಪದ್ಮವನ್ನು ನಾಲ್ಕು ಕೈಗಳಲ್ಲಿ ಹಿಡಿದಿರುವ ಪಿತಾಂಬರವನ್ನೂ ವನಮಾಲೆಯನ್ನೂ ಧರಿಸಿದ್ದ, ಕೇಶವನ ದಿವ್ಯ ಮಂಗಳರೂಪವನ್ನು ಕಣ್ತುಂಬ ನೋಡಿದ.

ಇದ್ದಿಯ ಶ್ರೀಹರಿ ನೀನೊಲಿದು ಬಂದಿದ್ದೀಯ ?

o o o

ಶೇಷ ಗೀರಿಶ ಮದ್ ಬಂಧು ! ಆದಿ
ಕೇಶವ ಗುರುವೆ ನೀನೆಂದು ! ಕೃಷ್ಣ
ಕ್ಲೇಶ ಬಿನ್ನೈಸುವೆ ಇಂದು ! ಅಹಾ
ಆಸೆ ಬಿಟ್ಟು ಪೂಜಿಸುವವರ ಮಾಧವ
ದಾಸನೆಂದು ವೆಂಕಟೇಶ ನೀನೊಲಿದು ಬಂದಿದ್ದೀಯಾ !!

ಎಂದು ನಮಸ್ಕರಿಸುವಷ್ಟರಲ್ಲಿ ಆ ದಿವ್ಯ ಮಂಗಳಮೂರ್ತಿ ಅದೃಶ್ಯವಾಗಿತ್ತು!

"ಕೇಶವನೊಲುಮೆಯು ಆಗುವ ತನಕ ಹರಿದಾಸರೊಳಿರು ಮನವೆ ? ಎಂದು ದರ್ಶನಕ್ಕಾಗಿ ಹಂಬಲಿಸುತ್ತಿದ್ದ ಮನಸ್ಸಿಗೆ ಸಮಾದಾನ ಹೇಳಿ ಕೊಳ್ಳುತ್ತಾ ಕನಕದಾಸರು ಹೊರಟುಬಿಟ್ಟರು. ಮನೆ ಬೇಡವಾಯಿತು. ಅರಮನೆ ಅವರ ಪಾಲಿಗೆ ಪಾಳುಬಿದ್ದಂಗಡಿಯಾಗಿತ್ತು. ಸಾಕು ಸಾಕು ಮನುಜರ ಸೇವೆ ಎಂದು ಅಧಿಕಾರಕ್ಕೆ ತಿಲಾಂಜಲಿ ಕೊಟ್ಟು ಹೊರಟೇ ಬಿಟ್ಟರು."

"ಇದನ್ನು ಯಾರು ಹೇಳಿದರು ದಾಸರೆ ?" – ಶ್ರೀಪತಿ ಪ್ರಶ್ನಿಸಿದ

"ನೋಡಪ್ಪ ಶ್ರೀಪತಿ, ಇವನ್ನು ಯಾರು ನಾನು ಕಂಡವನೆಂದು ಹೇಳಿಲ್ಲ. ಜನ ಅಂದಿನಿಂದ ಇಂದಿನವರೆಗೆ ಹೀಗಾಯಿತಂತೆ ಎಂದು ಆಡಿಕೊಳ್ಳುತ್ತಾ ಬಂದಿದೆ. ಈ ಅಂತೆ ಕಂತೆಗಳಿಗೆ ಕಿಂವದಂತಿ ಜನ ಶ್ರುತಿ ಮುಂತಾಗಿ ಹೇಳುತಾರೆ."

"ಇದನ್ನು ಸತ್ಯವೆಂದು ನಂಬಬೇಕೆ ?"

"ಕೃಷ್ಣ ! ಸತ್ಯ ನಂಬಿದವರಿಗೆ. ನಂಬಲೆಬೇಕೆಂಬ ಅಗ್ರಹ ಏನಿಲ್ಲ. ನಂಬದೆ ಇದ್ದರೆ ಬಿಡಲಿ. ಐಶ್ವರ್ಯ, ಅಧಿಕಾರ ಎಲ್ಲಾ ಇದ್ದವರು ಇದ್ದಕ್ಕಿದ್ದಂತೆ ಅದನ್ನು ಬಿಟ್ಟು ಹೊರಟಾಗ ಏನಾದರೊಂದು ಪ್ರಬಲ ಕಾರಣ ಇರಬೇಕಲ್ಲವೆ ? ಇದ್ದ ಸುಖ ಸುಪ್ಪತ್ತಿಗೆಯನ್ನು ತೊರೆಯುವವನು ಅದಕ್ಕಿಂತ ಮಿಗಿಲು ಎಂದು ಅನುಭವಿಸಿದ ಸುಖವನ್ನು ಕಾಣಲು ಹವಣಿಸು ವುದು ಸಹಜ ಕನಕನಾಯಕನು ಕನಕದಾಸನಾದುದರ ಹಿನ್ನೆಲೆ ಇದು.

ಈಷಣ ತ್ರಯದ ಬಯಲಾಸೆಯಲಿ ಭ್ರಮೆಗೊಂಡು |
ಬೇಸರದಿ ಮನದಿ ನೊಂದು !
ಹೇಸಿಕೆ ಸಂಸಾರ ಮಾಯಕ್ಕೆ ಸಿಲುಕಿ ನಾ
ಘಾಸಿ ಪಡಲಾರೆ ನಿಂದು ||
ವಾಸುದೇವನೆ ಇಂದು ಪೊಂದಿ ಬದುಕುವನೆಂದು
ಆಸೆ ಬಿಡುತಿಹೆನು ಇಂದು
ದಾಸನೆಂದೆನಿಸಿ ಡಂಗುರ ಹೊಯ್ಸಿ ಬಾಡವಾದಿ
ಕೇಶವನೆ ಕರುಣಿಸಿಂದು ಬಂದು

ಎಂದು ಹಾಡುತ್ತಾ ಏಕತಾನವನ್ನು ನುಡಿಸುತ್ತಾ ಹೊರಟೇಬಿಟ್ಟ ಕನಕನಾಯಕ".

"ಎಲ್ಲಿಗೆ ಹೊರಟರು ?"

"ಎಲ್ಲಿಗೆ ? ಆಗಿನ ಕಾಲದಲ್ಲಿ ಹೆಸರಾಂತ ಗುರುಗಳು ವ್ಯಾಸರಾಯ ರಿದ್ದರು. ಪುರಂದರದಾಸರು, ವಾದಿರಾಜರು ಮುಂತಾದವರು ಅವರ ಶಿಷ್ಯರು. ಅವರ ಕೀರ್ತಿಯು ಸಾಕಷ್ಟು ಹರಡಿತ್ತು. ಆದ್ದರಿಂದ ಆ ಪ್ರಸಿದ್ಧ

ಗುರುಗಳಿಂದ ದೀಕ್ಷೆ ಪಡೆಯಲು ಹೊರಟರಬೇಕು".

"ಅವರು ಎಲ್ಲಿದ್ದರು ದಾಸರೆ ?" – ಸುಶೀಲೆ ಕೇಳಿದಳು.

"ಅವರಿವರನ್ನು ವಿಚಾರಿಸುತ್ತ, ಕನಕನಾಯಕ ಮದನಪಲ್ಲಿಗೆ ಹೋದ. ಅಲ್ಲಿ ವ್ಯಾಸರಾಜರು ಜಲಾಶಯ ನಿರ್ಮಾಣಕಾರ್ಯದಲ್ಲಿ ತೊಡಗಿದ್ದರು. ಅಂದರೆ ಮದನಪಲ್ಲಿಯ ಹತ್ತಿರ ಕಂದಕೂರು ಎಂಬ ಊರಿದೆ. ಅಲ್ಲಿ ದೊಡ್ಡ ಕೆರೆ ಕಟ್ಟಿಸುತ್ತಿದ್ದರು. ಏಕೆಂದರೆ ಇದರಿಂದ ನಾಲ್ಕು ಸಹಸ್ರ ಎಕರೆಗೆ ನೀರು ಹಾಯುವರಿಯಾಗಿ ಸಮೃದ್ಧಿಗೆ ಕಾರಣವಾಗುತ್ತಿತ್ತು. ಆದರೆ ಅಲ್ಲಿ ಒಂದು ದೊಡ್ಡ ಅಡ್ಡಿ ಇತ್ತು. ಒಂದು ಕಡೆ ಅಂದರೆ–ಯಾವಕಡೆ ತೂಬು ಮಾಡಬೇಕೆಂದಿದ್ದರೋ ಆ ಕಡೆ ದೊಡ್ಡ ಬಂಡೆ ಇತ್ತು. ಅದನ್ನು ತೆಗೆಯದ ಹೊರತು ನೀರನ್ನು ಹಾಯಿಸಿ ಬೇಸಾಯಕ್ಕೆ ಉಪಯೋಗಿಸಿಕೊಳ್ಳುವ ಸಾಧ್ಯತೆ ಇರಲಿಲ್ಲ".

"ಅಗ ಕನಕದಾಸರ ಕೋಣ ಅದನ್ನು ಕೊಂಬಿನಿಂದ ಎತ್ತಿ ಎಸೆಯಿತಂತೆ. ಆದಕ್ಕೆ ಇವತ್ತಿಗೂ ಕೋಣನ ತೂಬು ಅಂತ ಕರಿತಾರಂತೆ"- ಕುಸುಮಾ ಎದ್ದುನಿಂತು ಹೇಳಿದಳು.

"ಸರಿಯಮ್ಮ. ನೀನು ಹೇಳಿದ್ದು ಸರಿ. ಆದರೆ ಹೀಗೆ ಮಧ್ಯದಲ್ಲಿ ಮಾತನಾಡಿದರೆ ಇತರರಿಗೆ ಅರ್ಥವಾಗುವುದು ಹೇಗೆ? ಕನಕದಾಸರ ಕೋಣ ಎಂದರೇನು ? ಅದೆಲ್ಲಿಂದ ಬಂತು ? ಹೀಗೆಲ್ಲಾ ಪ್ರಶ್ನೆ ಏಳುತ್ತೆ. ನಾನು ಒಂದು ಜಾಡು ಹಿಡಿದು ಅವರ ಚರಿತ್ರೆ ಹೇಳುತ್ತಿದ್ದೇನೆ. ಮನಸ್ಸಿಟ್ಟು ಕೇಳು, ಮಧ್ಯದಲ್ಲಿ ಮಾತನಾಡಬಾರದು ಗೊತ್ತಾಯಿತೆ ? ........ಕುಸುಮಾ ಹೇಳಿದ್ದು ಸರಿಯಾದ ವಿಷಯ. ವ್ಯಾಸರಾಯರು ಜ್ಞಾನಿಗಳು. ತಮ್ಮ ಕಡೆ ಬರುತ್ತಿದ್ದ ಕನಕನಾಯಕನ ಮುಖ ನೋಡಿಯೇ ಅವನ

ಯೋಗ್ಯತೆಯನ್ನು ತಿಳಿದುಕೊಂಡರು. ಅವನ ಸ್ವರೂಪ ಅರ್ಥವಾಯಿತು. ಆಗ ಕನಕನಾಯಕನು ಅವರ ಸಮೀಪಕ್ಕೇ ಬಂದು ನಮಸ್ಕರಿಸಿದ. ಆತನ ಕೋಲು, ಕಂಬಳಿ, ಕಿಂದರಿಯನ್ನು ನೋಡಿ– 'ಏನಯ್ಯಾ! ಏನಾಗಬೇಕು?' ಎಂದು ಕೇಳಿದರು".

"ನಾನು ಕನಕ. ನನ್ನ ಧ್ಯಾನಕೊಂದು ಯೋಗ್ಯ ವಸ್ತುವನ್ನು ಉಪದೇಶಿಸಿ ನನ್ನೊಡೆಯ!" ಎಂದು ಯಾಚಿಸಿದನು.

"ಡಣನಾಯಕನ ಮಗ – ಕನಕನಾಯಕನೆ ?"

"ಅಲ್ಲ ಈಗ ಆತ ಇಲ್ಲ. ಅಲ್ಲಿ ಉಳಿದಿರುವವನು ಕನಕ ಮಾತ್ರ".

"ಅಂದರೆ ಬರಿ ಕುರುಬ ಅನ್ನು. ಕುರುಬನಿಗೆ ಧ್ಯಾನಕ್ಕೆ ವಿಷಯ ಕೋಣ ಅಲ್ಲದೆ ಮತ್ತೇನು!" ಎಂದು ವ್ಯಾಸರಾಜ ಸಾರ್ವಭೌಮರು ಹೇಳಿದರು–ಮುಗುಳ್ನಗೆ ನಕ್ಕು. ಕನಕ ಅಲ್ಲಿಂದ ಹೊರಟು ಹೋಗಿ ಕೆಲವೇ ಕ್ಷಣಗಳಲ್ಲಿ ದೊಡ್ಡದೊಂದು ಕೋಣವನ್ನು ಜೊತೆಯಲ್ಲಿ ಕರೆತಂದ. ಆನೆಯ ಎತ್ತರದ ಆ ಕೋಣ–ಅಂದರೆ ಕೆಂಪಾದ ಕಣ್ಣುಗಳು, ಬಲವಾದ ಕೊಂಬುಗಳು ಬಾಲಕರಿಗೆ ಏನು ಎಂಥವರ ಎದೆಯನ್ನೂ ನಡುಗಿಸುವಂತಿತ್ತು. ಅವನು ಬಂದು ನಮಸ್ಕರಿಸಿ 'ಬುದ್ಧೀ, ಕೋಣ ಕೋಣ ಎಂದು ಧ್ಯಾನಿಸಿದೆ. ಕೋಣ ಬಂದಿದೆ. ಅಪ್ಪಣೆ ಆಗಲಿ. ಏನು ಮಾಡಬೇಕು?' ಎಂದು ಕೇಳಿದ.

'ನೋಡಪ್ಪ, ಆ ಕಲ್ಲು ನಮ್ಮ ಯೋಜನೆಗೆ ಅಡ್ಡಿಯಾಗಿದೆ. ಅದನ್ನು ಕೊರೆದು ನೀರು ಹಾಯುವಂತೆ ಮಾಡಿಸು' ಎಂದರು.

ಕ್ಷಣಾರ್ಧದಲ್ಲಿ ಕನಕನ ಆದೇಶದಂತೆ ಆ ಕೋಣ ಆ ಕಲ್ಲನ್ನು ಎತ್ತಿ ಎಸೆದುಬಿಟ್ಟಿತು. ತೂಬು ನಿರ್ಮಾಣವಾಯಿತು. ಕನಕದಾಸನ ಈ ಅದ್ಭುತ ಕೈಂಕರ್ಯವನ್ನು ಸ್ವೀಕರಿಸಿದ ವ್ಯಾಸರಾಯರು ಅವನನ್ನು ತಮ್ಮ

ಮಠದಲ್ಲಿರಿಸಿಕೊಂಡರು. ತಾವು ಸಂಚಾರ ಹೋದೆಡೆಯಲ್ಲೆಲ್ಲ ಕರೆದುಕೊಂಡು ಹೋಗುತ್ತಿದ್ದರು".

ಅಖಿಲೇಶ ಎದ್ದು ನಿಂತಿರುವುದನ್ನು ಕಂಡು ದಾಸರು ಕೇಳಿದರು :– "ಏನಪ್ಪ ಅಖಿಲೇಶ ? ಏನಾದರು ಹೇಳಬೇಕೂಂತ ಇದ್ದೀಯೋ ಕೇಳ ಬೇಕೂಂತ ಇದ್ದೀಯೋ ?"

"ಅಲ್ಲ ! ಆ ಕೋಣ ಯಮನ ಕೋಣ ಅಂತಾರಲ್ಲ ನಿಜವೇ ?"

"ಅಂತಾರೆ ನಿಜ. ನಂಬಿದವರಿಗೆ. ನಮ್ಮ ಹಿರಿಯರೆಲ್ಲರೂ ಹಾಗೇ ನಂಬಿದ್ದಾರೆ. ಈ ವ್ಯಾಸರಾಯರ ಪೀಠದಲ್ಲಿ ಸ್ವಾಮಿಗಳಾಗಿದ್ದವರು ಶ್ರೀ ವಿದ್ಯಾರತ್ನಾಕರ ಶ್ರೀಪಾದಂಗಳವರು. ಅವರು ದೊಡ್ಡ ಪಂಡಿತರೂ ಆಗಿದ್ದರು. ಅವರು "ಶ್ರೀ ವ್ಯಾಸರಾಜ ಚರಿತೆ" ಎಂಬ ಗ್ರಂಥವನ್ನು ಬರೆದಿದ್ದಾರೆ. ಅದರಲ್ಲಿ ಈ ವಿಚಾರ ಬಂದಿದೆ. ಆ ಕೋಣವನ್ನು "ಕಾಲವಾಹನ" ಎಂದು ಹೇಳಿದ್ದಾರಪ್ಪ ವಿಜಯ. ದೊಡ್ಡವರ ಮಾತನ್ನು ನಂಬಬೇಕು. ನಂಬಲಾಗದಂಥ ಬೇರೊಂದು ಪ್ರಮಾಣವಿದ್ದರೆ ಮಾತ್ರ ನಂಬಬಾರದು. ದೊಡ್ಡವರು ಅಂತದ್ದನ್ನು ಹೇಳಿರೋದಿಲ್ಲ. ನಾವು ತಿಳಿದುಕೊಳ್ಳುವಾಗ ಜಾರಿರಬಹುದು ಅಷ್ಟೆ. ಕನಕದಾಸರ ಮಹಿಮೆ ಅಂದಿನಿಂದ ಲೋಕದಲ್ಲಿ ಪ್ರಸಿದ್ಧಿಗೆ ಬಂದಿತು ನೋಡು. ಶ್ರೀ ವ್ಯಾಸತೀರ್ಥರು ಅವರಿಗೆ ವೈಷ್ಣವ ದಾಸದೀಕ್ಷೆಯನ್ನು ಕೊಟ್ಟರು.

ಆಗ ದಾಸರು ಆನಂದಭರಿತರಾಗಿ ಹಾಡಿದರಂತೆ–

ಬದುಕಿದೆನು ಬದುಕಿದೆನು ಭವ ಎನಗೆ ಇಂಗಿತು
ಪದುಮನಾಭನ ಪಾದದೊಲುಮೆ ಎನಗಾಯಿತು ||
ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು
ಹರಿಯ ನಾಮಾಮೃತ ಕಿವಿಗೊದಗಿತು||

ಹರಿಯದಾಸರು ಎನ್ನ ಬಂಧುಬಳಗಾದರು
ಹರಿಯ ಶ್ರೀ ಮುದ್ರೆ ಆಭರಣವಾಯಿತು ||೧||

ಇಂದೆನ್ನ ಜೀವಕ್ಕೆ ಸಕಲ ಸಂಪದವಾಯ್ತು
ಮುಂದೆನ್ನ ಜನ್ಮ ಸಫಲವಾಯಿತು
ತಂದೆ ಶ್ರೀ ಕಾಗಿನೆಲೆಯಾದಿ ಕೇಶವರಾಯ
ಎಂದೆನ್ನ ಹೃದಯದಲ್ಲಿ ನೆಲೆಯಾಗಿ ನಿಂತ ||೨||

"ದಾಸರೆ ಎರಡೆ ನುಡಿ ಹೇಳಿದರಲ್ಲ ಅಷ್ಟೇನಾ ಕನಕದಾಸರು ಬರೆದಿರುವುದು ?"

"ಇಲ್ಲಮ್ಮ ಸುಶೀಲ. ದಾಸರು ಮೂರು ನುಡಿಗಳನ್ನಾದರೂ ಹಾಡಿರುತ್ತಾರೆ. ಕನಕದಾಸರು ಮೂರು ನುಡಿ ಹಾಡಿದ್ದಾರೆ. ಇತ್ತೀಚೆಗೆ ಸಂಗೀತ ವಿದ್ವಾಂಸರು ಎರಡೆರಡು ನುಡಿಗಳನ್ನು ಮಾತ್ರ ಹಾಡುತ್ತಿದ್ದಾರೆ. ಅದನ್ನೆ ರೇಡಿಯೋಗಳು, ಕ್ಯಾಸೆಟ್‌ಗಳು ಹೇಳುತ್ತಿರುತ್ತವೆ. ಅದನ್ನು ಕೇಳಿ ಕೇಳಿ, ನೋಡು ಮಧ್ಯದ ನುಡಿ ಮರೆತೆಹೋಯಿತು. ಹಾಗೆ ಮರೆತದ್ದು ತಪ್ಪು. ಮೂರು ನುಡಿಗಳನ್ನು ಹೇಳಬೇಕಿತ್ತು ಹೇಳಲೇಬೇಕು"........ ಎರಡನೆ ನುಡಿಯನ್ನು ದಾಸರು ಜ್ಞಾಪಿಸಿಕೊಳ್ಳುತ್ತಿರುವಾಗ ಕುಸುಮ ಎದ್ದುನಿಂತು ಹಾಡಿದಳು–

"ಮುಕುತರಾದರು ಎನ್ನ ನೂರೊಂದು ಕುಲದವರು |
ಮುಕುತಿ ಮಾರ್ಗಕ್ಕೆ ಯೋಗ್ಯ ನಾನಾದೆನೋ ||

ಅಕಳಂಕ ಶ್ರೀ ಹರಿ ಭಕುತಿಗೆ ಮನಬೆಳೆದು |
ರುಕುಮಿಣಿಯರಸ ಕೈವಶನಾದ ನನಗೆ ||

"ಬೇಷ್ ಕುಸುಮ. ಬಹಳ ಸೊಗಸಾಗಿ ಹಾಡಿದೆ, ನೀನು ಸಹ ಮುಖಾರಿ ರಾಗ ಪ್ರವೀಣೆ !"

"ನೀವು ಹಾಡಿದ್ದು ಮುಖಾರಿರಾಗದಲ್ಲೇ ಅಲ್ಲವೆ ?" ವಿಜಯ ಕೇಳಿದ.

"ಹೌದು ವಿಜಯ. ಮುಖಾರಿ ರಾಗದಲ್ಲಿ ನಾನು ಹಾಡಿದ್ದು. ಇವಳು ಅದೇ ರಾಗದಲ್ಲಿ ಎಷ್ಟು ಸೊಗಸಾಗಿ ಹಾಡಿದಳು ನೋಡು. ದಾಸರು ಭಾವಗರ್ಭಿತರಾಗಿ ಆಡಿದ ಅಥವಾ ಹಾಡಿದ ದೇವರನಾಮಗಳನ್ನು ಶುದ್ಧವಾಗಿ ಹಾಡಿದರೆ ಎಷ್ಟು ಚೆನ್ನಾಗಿರುತ್ತೆ ನೋಡಿದೆಯ? ಸಂಗೀತ, ಸಾಹಿತ್ಯ ಮತ್ತು ಭಕ್ತಿ ಇವು ಮುಪ್ಪುರಿಯಾಗಿ ಏಕ ಕಾಲದಲ್ಲಿ ಎಲ್ಲರ ಮನಸ್ಸನ್ನು ಸೂರೆ ಗೊಳ್ಳುತ್ತದೆ. ಅದಕ್ಕೆ ಹರಿದಾಸರೆಲ್ಲಾ ಈ ಮಾರ್ಗವನ್ನು ಅನುಸರಿಸಿದ್ದಾರೆ."

"ಆಮೇಲೇನಾಯಿತು ದಾಸರೆ ? ಕನಕದಾಸರು ಎಷ್ಟುದಿನ ವ್ಯಾಸರಾಜಸ್ವಾಮಿಗಳ ಜೊತೆ ಇದ್ದರು ? ಏನುಮಾಡುತ್ತಿದ್ದರು ?" ಅದನ್ನು ಹೇಳಿ ಶ್ರೀಪತಿ ಕೇಳಿದ.

"ಕನಕದಾಸರು ಯಾರು ಅಂತ ದಿವ್ಯ ಜ್ಞಾನಿಗಳಾದ ಶ್ರೀ ವ್ಯಾಸರಾಯರಿಗೆ ಗೊತ್ತಿದ್ದ ಕಾರಣ ಅವರು ತಮ್ಮ ಮಠದಲ್ಲಿಟ್ಟುಕೊಂಡು ಅತ್ಯಂತ ಪ್ರೇಮಾದರದಿಂದ, ಇತಿಹಾಸ ಪುರಾಣಾದಿಗಳ ಸಾರವನ್ನು ಉಪದೇಶ ಮಾಡಿದರು. ಯಾವಾಗಲೂ ಅವರು ಕನಕದಾಸನನ್ನು ತಮ್ಮೊಡನೆ ಇಟ್ಟುಕೊಂಡು ಸಂಚಾರ ಮಾಡತೊಡಗಿದರು. ಆತ ಮೊದಲೇ ಪ್ರತಿಭಾನ್ವಿತ ಪಂಡಿತ ಆಗಿದ್ದ. ಅಧಿಕಾರ, ಸಂಪತ್ತು ಎಲ್ಲಕ್ಕು ತಿಲಾಂಜಲಿ ಕೊಟ್ಟು ಬಂದಿದ್ದ ಮಹಾವಿರಕ್ತನಾಗಿದ್ದ. ಗುರುಗಳು ತತ್ವೋಪದೇಶ ಮಾಡಿದ ಮೇಲೆ ಕೇಳಬೇಕೆ ! ಭಂಗಾರಕ್ಕೆ ಪುಟವಿಟ್ಟಂತಾಯಿತು. ಮಹಾ ತತ್ವಜ್ಞಾನಿಯಾಗಿಬಿಟ್ಟ ನಮ್ಮ ಕನಕದಾಸ.

"ಅಂದರೆ?" ಏಕಕಾಲದಲ್ಲಿ ನಾಲ್ಕಾರು ಜನ ಕೇಳಿದರು.

"ಭೇಷ್. ಸರಿಯಾಗಿ ಕೇಳುತ್ತಿದ್ದೀರಿ. ಭೇಷ್ ! ಕನಕದಾಸ ತತ್ವಜ್ಞಾನಿಯಾದ ಅಂದರೆ ತಾನು ಗುರುಗಳಿಂದ ಕೇಳಿದ್ದ, ಓದಿ ತಿಳಿದು ಕೊಂಡಿದ್ದ, ತತ್ವರಹಸ್ಯಗಳನ್ನೆಲ್ಲಾ ಅನುಭವಕ್ಕೆ ತಂದುಕೊಂಡಿದ್ದ, ಮಹಾನುಭಾವನಾಗಿಬಿಟ್ಟ. ಓದುವುದು, ಕೇಳುವುದು ಒಂದು ತೂಕ. ಅದರಿಂದ ಬರುವ ಜ್ಞಾನ ಬೇರೆ. ಅದೇ ಅನುಭವಕ್ಕೆ ಬಂದಾಗ ಆಗುವ ಆನಂದ ಬೇರೆ, ಯಾರು ಇಂಥ ಅನುಭವ ಪಡೆದಿರುತ್ತಾರೊ ಅವರನ್ನು ತತ್ವಜ್ಞಾನಿಗಳೆಂದು ಕರೆಯುತ್ತಾರೆ ...... ಗೊತ್ತಾಯಿತೆ ಕೃಷ್ಣ, ನಿನಗೆ ಸ್ಪಷ್ಟವಾಗಲಿಲ್ಲ ಅಲ್ಲವೆ ನನ್ನ ಮಾತು ಅದಕ್ಕೇ ನಿನ್ನ ಮುಖದಲ್ಲಿ ಸಂಶಯ ಸುಳಿಯಿತು ನನಗೆ ಗೊತ್ತಾಯಿತು. ಈಗ ಒಂದು ಸ್ವಾರಸ್ಯವಾದ ಘಟನೆ ನಡೆದದ್ದು ಹೇಳ್ತೀನಿ.

"ಕೇಳಿ, ಎಲ್ಲ ಸ್ಪಷ್ಟವಾಗುತ್ತೆ. ಒಂದು ಸಲ ಈ ವ್ಯಾಸರಾಜಸ್ವಾಮಿಗಳು ಕನಕದಾಸನನ್ನು ಕರೆದುಬಿಟ್ಟು ಮೊದಲು ತೀರ್ಥವನ್ನು ಕೊಟ್ಟುಬಿಟ್ಟರು !. ಮೊದಲೇ ಮಠದಲ್ಲಿದ್ದವರಿಗೆ ಈ ಗುರುಗಳು ಕುರುಬನ ಮೇಲಿಟ್ಟಿರುವ ಅಪಾರ ವಾತ್ಸಲ್ಯಕ್ಕೆ ಬೇಸರಗೊಂಡಿದ್ದರು. ಅಸೂಯೆಯನ್ನು ಪಡುತ್ತಿದ್ದರು. ಏಕಾಂತ ಗೋಷ್ಠಿಯಲ್ಲಿ ಪುರಂದರದಾಸರು, ವಾದಿರಾಜರು, ವಿಜಯೇಂದ್ರ ಸ್ವಾಮಿಗಳವರು ಮಾತ್ರ ಸೇರುತ್ತಿದ್ದರು. ಅಲ್ಲಿ ಮಠದ ದಿಗ್ಗಜ ಪಂಡಿತರು ಸೇರುವಂತಿರಲಿಲ್ಲ. ಅಲ್ಲಿ ಕನಕದಾಸನನ್ನು ಮಾತ್ರ ಎಲ್ಲಿದ್ದರೂ ಕರೆಸಿಕೊಳ್ಳುತ್ತಿದ್ದರಂತೆ. ಒಂದು ಸಲ ಕನಕದಾಸ ನದಿಯ ಆಚೆಯ ದಂಡೆಯಲ್ಲಿದ್ದನಂತೆ. ಶ್ರೀ ವ್ಯಾಸರಾಜರ ಗೋಷ್ಠಿ ನದಿಯ ಈಚೆ ದಂಡೆಯಲ್ಲಿ ಸೇರಿತಂತೆ. ನಿರ್ಜನವಾದ ಈ ನದೀತೀರದಲ್ಲಿ ಎಂದಿನಂತೆ ಅವರುಗಳು ಕೆಲವು ಸಂದರ್ಭಗಳಲ್ಲಿ ನಗುತ್ತಾ, ಕುಣಿಯುತ್ತಾ

ಉನ್ಮತ್ತರಂತೆ ಹಾಡುತ್ತಿದ್ದರಂತೆ. ಒಮ್ಮೊಮ್ಮೆ ಪ್ರಪಂಚದಲ್ಲಿ ಬೇರು ಬಿಟ್ಟಿರುವ ಅಜ್ಞಾನ ಅದರ ಪರಿಣಾಮವಾಗಿ ಜನರು ಅನುಭವಿಸುತ್ತಿರುವ ಕಷ್ಟಕೋಟಲೆಗಳನ್ನು ಸ್ಮರಿಸಿಕೊಂಡು ದಯಾಪರವಶರಾಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದರಂತೆ. ಹೀಗೆ ಆ ಏಕಾಂತ ಗೋಷ್ಠಿಯಲ್ಲಿದ್ದ ವ್ಯಾಸರಾಜರಿಗೆ ಕನಕ ನಿಲ್ಲದಿದ್ದುದು ಬೇಸರಕ್ಕೆ ಕಾರಣವಾಯಿತಂತೆ. ಆಗ ಅಲ್ಲಿಗೆ ದನಗಳನ್ನು ನೀರು ಕುಡಿಸಲು ಹೊಡೆದುಕೊಂಡು ಬಂದ ಒಬ್ಬ ದನಕಾಯುವ ಕುರುಬ ನನ್ನು ಕರೆದು 'ಹೋಗಿ ಆಚೆ ದಂಡೆಯಲ್ಲಿರುವ ಕನಕದಾಸನನ್ನು ಕರೆದು ಕೊಂಡು ಬಾ' ಎಂದು ಹೇಳಿಕಳಿಸಿ ಕರೆಸಿಕೊಂಡರಂತೆ ....... .."

"ಆ ಕುರುಬ ಬಾಲಕನೇ ಮುಂದೆ ನೂರಾರು ವರ್ಷಗಳಾದ ಮೇಲೆ ಹುಟ್ಟಿ, ಜಗನ್ನಾಥ ದಾಸನೆಂದು ಪ್ರಸಿದ್ಧಿಗೆ ಬಂದನಂತೆ ನಿಜವೇ?"– ಮಧ್ಯದಲ್ಲಿ ಅನಿಲೇಶ ಕೇಳಿದ.

"ಮೊದಲೇ ಹೇಳಿದನಲ್ಲಪ್ಪ. ಇಂಥ ಜನಶ್ರುತಿಗಳಿಗೆ ನಂಬಿಕೆ ಆಧಾರ. ನಂಬಿದವರಿಗೆ ಅವು ನಿಜ."

"ಮಧ್ಯದಲ್ಲಿ ಏನೇನೋ ಕೇಳ್ತಾರೆ" ಎಂದು ವಿಜಯ ಗೊಣಗಿದ.

"ಗೊಣಗಬೇಡಪ್ಪ. ಸರಿಯಾದ ಪ್ರಶ್ನೆ ಕೇಳಿದರೆ ಬೇಸರವೇಕೆ? ಉತ್ತರಕೊಟ್ಟು ಮುಂದುವರಿಸಿದರಾಯಿತು. ಕನಕದಾಸನನ್ನು ಶ್ರೀ ವ್ಯಾಸ ರಾಜ ಸ್ವಾಮಿಗಳು ಕರೆಸಿಕೊಂಡರೆಂದು ಹೇಳಿದೆನಲ್ಲಾ. ಇದು ಪಂಡಿತರನೇಕರಿಗೆ ಸರಿಬಿದ್ದಿರಲಿಲ್ಲ. ಗೊಣಗಿಕೊಳ್ಳುತ್ತಲೆ ಇದ್ದರು. ಸ್ವಾಮಿಗಳ ಹೆದರಿಕೆಗೆ ಸುಮ್ಮನಿದ್ದರೂ ಹಿಂದೆ ಗುಸುಗುಸು ಪಿಸುಪಿಸು ನಡೆಯುತ್ತಿತ್ತು. ಸ್ವಾಮಿಗಳು 'ಕನಕನನ್ನು ಕೆಣಕದಿರಿ ಕೆಣಕಿ ಮಣಕದಿರಿ' ಎಂದು ಎಚ್ಚರಿಸುತ್ತಿದ್ದರು. ಇದರಿಂದ ಅವರಿಗೆಲ್ಲಾ ಮತ್ತಷ್ಟು ಬೇಸರವಾಗುತ್ತಿತ್ತು. ಅಸೂಯೆ ಹೆಚ್ಚುತ್ತಿತ್ತು.... ..."

"ಅವರೆಲ್ಲ ಕನಕದಾಸರಿಗೆ ಏನಾದರು ಮಾಡಿದರಾ ದಾಸರೆ ? ಕಳವಳ ಧ್ವನಿಯಲ್ಲಿ ಸುಶೀಲಾ ಕೇಳಿದಳು.

"ಇಲ್ಲಮ್ಮ. 'ತನು ನಿನ್ನದು ಜೀವನ ನಿನ್ನದು'. ಎಂದು ದೃಢವಾಗಿ ನಂಬಿದವರಿಗೆ ಯಾರ ಭಯ ? .... ಆದರೆ ಇವರ ಬಗ್ಗೆ ಅಸೂಯೆ ಇಂದ ಮಾತನಾಡುವವರಿಗೆ ಪಾಠ ಕಲಿಸಲು ಒಮ್ಮೆ ವ್ಯಾಸರಾಜಸ್ವಾಮಿಗಳು ದೊಡ್ಡ ಸಭೆಯಲ್ಲಿ ಕುಳಿತು ಕೈಯನ್ನು ಭದ್ರವಾಗಿ ಮುಚ್ಚಿಕೊಂಡು 'ಇದರಲ್ಲೇನಿದೆ ಹೇಳಿ ನೋಡೋಣ', ಎಂದರು. ಆಗ ಎಲ್ಲರು ಒಬ್ಬರ ಮುಖವನ್ನೊಬ್ಬರು ನೋಡಿ ಸುಮ್ಮನಿದ್ದರು. ಕನಕದಾಸರು ಮಾತ್ರ ಎದ್ದು ನಿಂತು – ಈತನೀಗ ವಾಸುದೇವನು ಎಂದು ಪದವನ್ನು ಹಾಡಿ ಅದು ವಾಸುದೇವ ಸಾಲಿಗ್ರಾಮವೆಂದು ತಿಳಿಸಿದರು. ಅದು ದಿಟವಾಗಿತ್ತು. ಸ್ವಾಮಿಗಳು ಕೈಬಿಚ್ಚಿ ಸಾಲಿಗ್ರಾಮವನ್ನು ತೋರಿಸಿದಾಗ ಎಲ್ಲರು ಆಶ್ಚರ್ಯ ಚಕಿತರಾದರು "

"ಇದೇ ದೇವರನಾಮವನ್ನು ಬೇರೆ ಸಂದರ್ಭದಲ್ಲಿ ಹೇಳಿದ್ದು ಅಂತ ಕೇಳಿದ್ದೇನೆ" – ಶ್ರೀಪತಿ ಎದ್ದುನಿಂತು ಕೇಳಿದ.

ದಾಸರು – "ಯಾವ ಸಂದರ್ಭದಲ್ಲಿ.?"

ಶ್ರೀಪತಿ – "ಒಮ್ಮೆ ಕನಕದಾಸ ಅಪರೋಕ್ಷ ಜ್ಞಾನಿಯಾದರೆ ನಮಗೆಲ್ಲಾ ದೇವರನ್ನು ತೋರಿಸಲಿ ಎಂದು ಪಂಡಿತರು ಸವಾಲು ಹಾಕಿದರಂತೆ. ಸ್ವಾಮಿಗಳ ಎದುರಿನಲ್ಲಿ ಕನಕದಾಸ ಒಪ್ಪಿಕೊಂಡನಂತೆ. ಆ ಸುದ್ದಿ ಕೇಳಿ ಸಾವಿರಾರು ಜನ ದೇವರನ್ನು ನೋಡಲು ಕಾದಿದ್ದರಂತೆ. ಆಗ ಎಲ್ಲಿಂದಲೋ ಒಂದು ನಾಯಿ ದೇವರ ಪೂಜೆ ನೋಡುತ್ತಿದ್ದ ಆ ಮಡಿವಂತರ ಮಧ್ಯ ಬಂದಿತಂತೆ. ದೊಣ್ಣೆ ತೆಗೆದುಕೊಂಡು ಅದನ್ನು ಹೊಡೆದರಂತೆ."

"ಕೊಂಯ್ಯೋ, ಕೊಂಯ್ಯೋ ಎಂದು ಕೂಗಿ ಅದು ಓಡಿತಂತೆ." ಅಖಿಲೇಶ ವ್ಯಂಗ್ಯವಾಗಿ ಹೇಳಿದ. ಎಲ್ಲರೂ ಗೊಳ್ಳನೆ ನಕ್ಕುಬಿಟ್ಟರು.

ದಾಸರು ಶ್ರೀಪತಿಯ ಕಡೆ ನೋಡಿ, "ಹೇಳು ನೀನು ಸರಿಯಾಗಿ ಹೇಳುತ್ತಿದ್ದೀಯೆ. ಮೊದಲು ಕೇಳಿ" ಎಂದು ಇತರ ಬಾಲಕರಿಗೆ ಕೇಳಿಕೊಂಡರು.

ಶ್ರೀಪತಿ – "ಆಗ ಹಚ ಹಚ ಎಂದು ಜನರು ಓಡಿಸಿಬಿಟ್ಟರು, ಹೊಡೆದು ಬಡಿದು. 'ದೇವರನ್ನು ತೋರಿಸಲಿಲ್ಲ. ಎಲ್ಲಾ ಸುಳ್ಳು, ಬೂಟಾಟಿಕೆ,' ಎಂದು ಜನ ಆಡಿಕೊಳ್ಳತೊಡಗಿದರಂತೆ. ಪುರಂದರದಾಸರು ಒಳಗೆ ಮತ್ತು ಹೊರಗೆ ಕುಂಯಿ ಕುಂಯಿ ಎಂದು ಬಂದು ಮಾಯವಾದ ನಾಯಿಯನ್ನು ನೋಡಿದರು. ಕನಕದಾಸರು "ಡೊಂಕು ಬಾಲದ ನಾಯಕರೆ" ಎಂದು ಹಾಡು ಹೇಳುತ್ತಿದ್ದರಂತೆ.

"ಅದಾಯ್ತು. ಈತನೀಗ ವಾಸುದೇವ ಎಂಬುದಕ್ಕೆ ಏನು ಹೇಳಿದ ಹಾಗಾಯ್ತು ನೀನು" ವಿಜಯ ಆಕ್ಷೇಪವೆತ್ತಿದ.

"ಅದೇ ಹೇಳ್ತಾ ಇದ್ದೆ. ವ್ಯಾಸರಾಜಸ್ವಾಮಿಗಳು – "ಕನಕ, ಏನಪ್ಪ ತೋರಿಸಲೇ ಇಲ್ಲ ?" ಎಂದು ಆಕ್ಷೇಪ ಮಾಡಿದರಂತೆ ಪಂಡಿತರೆದುರಿನಲ್ಲಿ.

"ಕನಕದಾಸರು 'ಬಂದಿದ್ದನಲ್ಲ' ಸ್ವಾಮಿಗಳೆ ! ನೀವು ಮಡಿವಂತರು. ಹೊಡೆದು ಅಟ್ಟಬಿಟ್ಟರಿ ಪಾಪ ! ಕುಂಯಿ ಕುಂಯಿ ಎಂದು ವರಲಿ ಹೊರಟು ಹೋದ" ಎಂದು ಗೊಳ್ಳನೆ ನಕ್ಕನಂತೆ. ವ್ಯಾಸರಾಯರೂ ನಕ್ಕರು. ಇತರರು ಅರ್ಥವಾಗದೇ ಇದ್ದರಂತೆ. "ಹೋಗಲಿ. ನಾಳೆ ತೋರಿಸಿ ನಮಗೆ ಪರಿಚಯ ಮಾಡಿಕೊಡು" ಎಂದು ಅಜ್ಞರಂತೆ ಸ್ವಾಮಿಗಳು ಕೇಳಿಕೊಂಡರು. ಮಾರನೇ ದಿನವೂ ಕಿಕ್ಕಿರಿದು ಜನ ಸೇರಿದ್ದರು. ಎಲ್ಲರೂ ನೋಡುತ್ತಿದ್ದಂತೆಯೇ ದೇವರ ಮನೆಯಲ್ಲಿ ಒಂದು ದೊಡ್ಡ ಸರ್ಪ ಕಾಣಿಸಿ

ಕೊಂಡಿತು ಜನ ಹೆದರಿ ಸರಿದು ಹೋದರು. "ಈತನೀಗ ವಾಸುದೇವನು" ಎಂಬುದಾಗಿ ಆತನ ಪರಿಚಯ ಮಾಡಿಕೊಡುತ್ತಾ ಕನಕದಾಸರು ಹಾಡುತ್ತಿದ್ದರಂತೆ. ವ್ಯಾಸರಾಜರು ಅಭಿಷೇಕಕ್ಕಿಟ್ಟಿದ್ದ ಹಾಲನ್ನು ಸರ್ಪಕ್ಕೆ ಕುಡಿಸಿದರಂತೆ. ಕೈಮುಗಿದು ಮಾನಸಿಕ ಪೂಜೆಮಾಡುತ್ತಿದ್ದರಂತೆ ಹೆಡೆಎತ್ತಿ ಆ ಹಾವು ಜನರ ಮಧ್ಯೆ ಬರಲು ಎಲ್ಲರು ಹೆದರಿ ಓಡಿಬಿಟ್ಟರಂತೆ !

"ಊಟವಾದ ಮೇಲೆ ಇವತ್ತೂ ಸಹ ದೇವರಿಲ್ಲ ದಿಂಡರಿಲ್ಲ ಎಲ್ಲಾ ಸುಳ್ಳು ಅಂತ ಜನ ಅಂದಾಗ – ನಿನ್ನೆ ಬಂದಾಗ ಓಡಿಸಿದಿರಿ. ಇವತ್ತು ಬಂದಾಗ ಓಡಿದಿರಿ, ಎಂದು ಕನಕದಾಸರು ಹೇಳಿದರಂತೆ."

"ಶ್ರೀಪತಿ ! ನೀನು ಬಹಳ ಚೆನ್ನಾಗಿ ಕತೆ ಹೇಳುತ್ತೀಯೆ. ನೀನು ಹೇಳಿದ ಕತೆಯನ್ನು ಜನ ಹೇಳುತ್ತಾರೆ. ಯಾವುದು ದಿಟವೋ, ಎರಡು ದಿಟವೋ, ನಾವು ಹೇಗೆ ಹೇಳುವುದು ? ಒಟ್ಟಿನಲ್ಲಿ ಕನಕದಾಸನ ಯೋಗ್ಯತೆಯನ್ನು ವ್ಯಾಸರಾಜ ಗುರುಸಾರ್ವಭೌಮರು ಅರಿತಿದ್ದರು, ಆದ್ದರಿಂದಲೆ ಆತನಿಗೆ ಮೊದಲು ತೀರ್ಥಕೊಟ್ಟರು. ಇದರಿಂದ ಪಂಡಿತರಿಗೆ ತುಂಬ ಬೇಸರವಾಯಿತು. ಸಹನೆ ಮೀರಿ ನೇರವಾಗಿ ವ್ಯಾಸರಾಯರನ್ನು ಆಕ್ಷೇಪಿಸಿ ಒಂದು ಹಾಡನ್ನು ಹೇಳಿದ್ದಾರೆ.

"ನನಗೆ ಬರುತ್ತೆ ಆ ದೇವರನಾಮ. ಹೇಳಲಾ ?" ಕುಸುಮ ಕೇಳಿದಳು.

"ಹೇಳಮ್ಮ ಯಾವುದು ಅದು ?"

ಕುಸುಮ— "ಕನಕದಾಸನ ಮೇಲೆ ದಯಮಾಡಲು ವ್ಯಾಸಮುನಿ

ಮಠಿಕರೆಲ್ಲರು ದೂರುತಿಹರು ||ಪ||

ಕುಸುಮಾ ಪೂರ್ತಿ ಪದವನ್ನು ಹಾಡಿ ಮುಗಿಸಿದಾಗ ದಾಸರು

ಮೆಚ್ಚುಗೆಯನ್ನು ಸೂಚಿಸುತ್ತಾ – ಭಲಾ! ಎಷ್ಟು ಚೆನ್ನಾಗಿ ಕಾಂಭೋದಿ ಹಾಡುತ್ತೀಯೆ. ನಿನ್ನ ಶಾರೀರವೂ ಚೆನ್ನಾಗಿದೆ.

'ನೋಡಿ ಈ ಹಾಡಿನಲ್ಲಿ ಸಾಲಿಗ್ರಾಮದ ಕತೆ ಬಂದಿದೆ'.

"ಬಾಳೆ ಹಣ್ಣಿನ ಕತೆ ನನಗೆ ಗೊತ್ತು" ಅಖಿಲೇಶ ಹೇಳಿದ.

"ನನಗೂ ಗೊತ್ತು" – ಅರ್ಕೇಶ ಹೇಳಿದ.

ದಾಸರು — "ಅದೆಲ್ಲರಿಗೂ ಗೊತ್ತು. ನಾನು, ಬಾಳೆ ಹಣ್ಣಿದ್ದಿದ್ದರೆ ನಿಮಗೆಲ್ಲ ಒಂದೊಂದು ಕೊಟ್ಟು ಯಾರೂ ಕಾಣದಂತೆ ತಿಂದು ಬನ್ನಿ ಅನ್ನುತ್ತಿದ್ದೆ.... ಇರಲಿ – ಕನಕದಾಸರು ಹಣ್ಣೇಕೆ ತಿನ್ನಲಿಲ್ಲ ಹೇಳ್ತೀರಾ. ಅಪ್ಪ".

"ಪುರಂದರ ದಾಸರೇ ಹೇಳಿಬಿಟ್ಟಿದ್ದಾರಲ್ಲ! ಈ ದೇಹದ ಒಳಗೆ ತತ್ವಾಭಿಮಾನಿ ದೇವತೆಗಳಿದ್ದಾರೆ ಏಕಾಂತ ಸ್ಥಳ ಎಲ್ಲಿದೆ ಎಂದು ಬಾಳೆ ಹಣ್ಣು ತಂದು ಮುಂದಿಟ್ಟು ಕೈಮುಗಿದರಂತೆ. ತಿಂದು ಬಂದ ವಿದ್ವಾಂಸರಿಗೂ ಇದು ಗೊತ್ತಿತ್ತು. ಆದರೆ ತಿನ್ನುವಾಗ ಮಾತ್ರ ಅವರಿಗೆ ಇದು ಜ್ಞಾಪಕಕ್ಕೆ ಬರಲಿಲ್ಲ. 'ಅಪರೋಕ್ಷ ಜ್ಞಾನಿಗಳಿಗೂ ಇತರ ಪಂಡಿತರ ಜ್ಞಾನಕ್ಕೂ ಇದೇ ವ್ಯತ್ಯಾಸ' ಅಂತ ವ್ಯಾಸರಾಜರು ಆಗ ಹೇಳಿದರಂತೆ.

"ಹೌದು ಶ್ರೀಪತಿ. ಅಪರೋಕ್ಷ ಜ್ಞಾನಿಗಳ ಮಾತು ಅವರ ಅನುಭವದ ಮಾತು. ಪಂಡಿತರ ಮಾತು ಕಲಿತ ಮಾತು. ಉರು ಹೊಡೆದದ್ದು ಅಷ್ಟೆ. ಅದು ಮರೆತು ಹೋಗುತ್ತೆ. ಅನುಭವಕ್ಕೆ ಬಂದದ್ದು ಮರೆಯೋದೇ ಇಲ್ಲ...... .ದಾಸರು ಅನುಭವದಿಂದ ಇತರರಿಗಿಂತ ಹಿರಿಯರು, ಪೂಜ್ಯರು, ಅನ್ನಿಸಿಕೊಂಡಿದ್ದಾರೆ.

"ವ್ಯಾಸರಾಜ ಸ್ವಾಮಿಗಳು ಮತ್ತೆ ಮತ್ತೆ ಕನಕದಾಸರನ್ನು ಏಕೆ ಪರೀಕ್ಷೆ ಮಾಡುತ್ತಿದ್ದರು?" – ಅಖಿಲೇಶ ಕೇಳಿದ.

"ಚಿನ್ನದ ಬಣ್ಣ ತಿಳಿಯಲು ಅಕ್ಕಸಾಲೆ ಮೊದಲು ಅದನ್ನು ಕಾಯಿಸಿ, ನೀರಿನಲ್ಲಿ ಎದ್ದಿ, ಸುತ್ತಿಗೆಯಿಂದ ಕುಟ್ಟಿ, ಬಟ್ಟೆಯಿಂದ ಒರೆಸಿ– ಒರೆಗಲ್ಲಮೇಲೆ ಉಜ್ಜುತ್ತಾನೆ. ಹಾಗೆ ಕನಕದಾಸನ ಪ್ರತಿಭೆ, ಪಾಂಡಿತ್ಯ, ಅನುಭವ ಇವುಗಳ ಪರಿಚಯು ಸಾಮಾನ್ಯ ಜನರಿಗೆ ಮೂಡಿಸಲು ಹಾಗೆ ಮಾಡುತ್ತಿದ್ದರು. ಅವರಿಗೆ ಕನಕನ ಯೋಗ್ಯತೆ ಗೊತ್ತಿತ್ತು. ಒಮ್ಮೆ ಕನಕದಾಸರು-ಸ್ವಾಮಿಗಳು ಮಾನಸ ಪೂಜೆ ಮಾಡುತ್ತಿದ್ದಾರೆ. ಕಿರೀಟ ತೆಗೆದಿಟ್ಟು ಮಾಲೆ ಹಾಕಿದರೆ ಸರಿಹೋಗುತ್ತೆ! ಅಂತ ತಿಳಿಸಪ್ಪ' ಎಂದು ಹೇಳಿ ಕಳಿಸಿದರು. ಆಗ ನಿಜಕ್ಕೂ ಸ್ವಾಮಿಗಳು ಮಾನಸ ಪೂಜೆ ಮಾಡುತ್ತಿದ್ದರು. ಹಾರ ಸಮರ್ಪಿಸುವಾಗ ಅದು ಕೊರಳಲ್ಲಿ ಇಳಿಯುತ್ತಿರಲಿಲ್ಲ. ತಲೆಯಲ್ಲಿ ಸಿಕ್ಕಿಕೊಳ್ಳುತ್ತಿತ್ತು. ಆ ಮಾತನ್ನು ಕೇಳಿ ಆಶ್ಚರ್ಯ ಭರಿತರಾದರು ಅನ್ನುತ್ತಾರೆ. ಇದು ಅವರಿಬ್ಬರಿಗೆ ತಿಳಿದ ವಿಷಯ. ಇಬ್ಬರೂ ಪರಮಾತ್ಮನನ್ನು ಸರ್ವದಾ ಸರ್ವತ್ರ ಪೂಜಿಸುವ ಮಹಾನುಭಾವರು. ಆದರೆ ಕನಕದಾಸನು ಯಾವಾಗಲು ಪರಮಾತ್ಮನನ್ನು ಪೂಜಿಸುತ್ತಿರುತ್ತಾನೆ ಅಂತ ಜನರಿಗೆ ತೋರಿಸಬೇಕು ಅಂತ ಒಂದು ಸಲ ಪ್ರಯಾಣ ಮುಗಿಸಿ ಪೂಜೆಗೆ ಕುಳಿತಾಗ 'ಈ ತುಳಸಿ ನಿರ್ಮಾಲ್ಯವಾಗಿದೆ ಬೇರೆ ತೆಗೆದುಕೊಂಡು ಬಾ'. ಅಂತ ಎಡಬಲ ಸೇವೆಯ ಬ್ರಾಹ್ಮಣನಿಗೆ ಹೇಳಿದರಂತೆ.

ಆತ– "ಇಲ್ಲವಲ್ಲ! ಇವತ್ತು ತಂದದ್ದು. ದಾರಿಯಲ್ಲಿ ಬರುವಾಗ ಬಿಡಿಸಿ ತಂದದ್ದು". ಎಂದು ಸಮಜಾಯಿಸಿ ಹೇಳಿದನಂತೆ. "ನೋಡು– ಇದು ಬಾಡಿಹೋಗಿದೆ. ಹೀಗೆ ಎಸಳು ಬಾಡಿರಬಾರದು; ಅಂಥ ತುಳಸಿ ತೆಗೆದುಕೊಂಡು ಬಾ" ಅಂದರಂತೆ.

ಅವನು ಯಾವ ಯಾವ ತುಳಸಿಗಿಡವನ್ನು ನೋಡಿದರೂ ಎಸಳು ಬಾಡಿರುವುದನ್ನು ಕಂಡು – "ಇಲ್ಲಿರುವ ಗಿಡಕ್ಕೆ ನೀರು ಕಡಿಮೆ ಅಂತ

ಕಾಣಿಸುತ್ತೆ, ಎಲ್ಲವೂ ಬಾಡಿಹೋಗಿವೆ ಏನು ಮಾಡಲಿ?" ಎಂದನಂತೆ.

ವ್ಯಾಸರಾಜರು– "ಹಾಗಲ್ಲಪ್ಪ ಕನಕದಾಸ ಅವುಗಳನ್ನು ದೇವರಿಗೆ ಏರಿಸಿಬಿಟ್ಟಿದ್ದಾನೆ. ದೂರದ ತೋಟದಲ್ಲಿ ತಂಪಿನಲ್ಲಿರುವ ಗಿಡದಿಂದಲಾದರೂ ತಾ" ಎಂದು ಹೇಳಿದರಂತೆ. ಅಲ್ಲಿಯೂ ಎಸಳು ಬಾಡಿರುವುದನ್ನು ಗಮನಿಸಿದ ಶಿಷ್ಯ ಬಂದು 'ಅಲ್ಲಿಯದನ್ನೂ ನಿಮ್ಮ ಕನಕದಾಸ ಏರಿಸಿ ಬಿಟ್ಟಿದ್ದಾನೆ'! ಅಂತ ತಿಳಿಸಿದನಂತೆ. ಹೀಗೆ ಕನಕದಾಸರು ವ್ಯಾಪ್ತೋಪಾಸಕರು ಎಂದು ತೋರಿಸಿ ಕೊಟ್ಟರು. ಕಂಡ ಕಂಡಲ್ಲಿ ವಿಶ್ವರೂಪ ಕಾಣುವ ದಾಸವರೇಣ್ಯರಾಗಿದ್ದರು.

ಕನಕದಾಸರ ಕೀರ್ತಿ ದಿನದಿನಕ್ಕೆ ಹೆಚ್ಚು ಹೆಚ್ಚಾಗಿ ಪ್ರಸರಿಸ ತೊಡಗಿತು. ಜೊತೆಯಲ್ಲಿ ಅಸೂಯೆಯೂ ಹೆಚ್ಚಿತು ವಿದ್ವಾಂಸರಲ್ಲಿ.

ಸ್ವಾಮಿಗಳು ಆ ವಿದ್ವಾಂಸರ ಮುಂದೆ ಕನಕದಾಸರ ಹಾಡುಗಳನ್ನು ಉಲ್ಲೇಖಿಸಿ ಅದರ ಸ್ವಾರಸ್ಯಕ್ಕೆ ತಲೆದೂಗಿದಾಗಲಂತೂ ವಿದ್ವಾಂಸರಿಗೆ ಅಸಹನೀಯ ಮಾತ್ಸರ್ಯ ಬೆಳೆಯುತ್ತಿತ್ತು. ಒಮ್ಮೆ ಸಭೆಯಲ್ಲಿ "ಮೋಕ್ಷಕ್ಕೆ ಅಧಿಕಾರಿ" ಯಾರು ಎಂಬ ಚರ್ಚೆ ಬಂದಿತು.

"ಜ್ಞಾನಿಯೆ ಮೋಕ್ಷಕ್ಕೆ ಅಧಿಕಾರಿ."

"ಜ್ಞಾನಿಯಾದ ಬ್ರಾಹ್ಮಣನೇ ಮೋಕ್ಷಕ್ಕೆ ಅಧಿಕಾರಿ".

"ವೇದಶಾಸ್ತ್ರಾನುಮೋದಿತ ದ್ವೈತ ವೇದಾಂತ ಜ್ಞಾನಉಳ್ಳ ಬ್ರಾಹ್ಮಣನೇ ಮೋಕ್ಷಾಧಿಕಾರಿ.

"ಮಹಾತ್ಮ್ಯ ಜ್ಞಾನ ಅಂದರೆ ವಿಷ್ಣುವೇ ಸರ್ವೋತ್ತಮ ಎಂಬ ಜ್ಞಾನ ಮೋಕ್ಷಕ್ಕೆ ಕಾರಣ ಅಂಥ ಜ್ಞಾನ ಕೇವಲ ಮಧ್ವಾಚಾರ್ಯರು ಮಾತ್ರ ಅನುಗ್ರಹಿಸಬಲ್ಲರು. ಆದ್ದರಿಂದ ಯಾರು ವಿಷ್ಣು ಸರ್ವೋತ್ತಮ ವಾಯು

ಜೀವೋತ್ತಮ ಎಂದು ತಿಳಿದು ತಾರತಮ್ಯ ಪ್ರಕಾರ ಭಕ್ತಿಯನ್ನು ಮಾಡುತ್ತಾರೊ ಅಂಥವರು ಮೋಕ್ಷಾಧಿಕಾರಿಗಳು".

"ತಾರತಮ್ಯ ಇಲ್ಲಿ — ಈ ಲೋಕದಲ್ಲಿ ಮಾತ್ರ ಇದೆ ಅಂತ ಅಲ್ಲ. ಬರಿ ತಾರತಮ್ಯ ಜ್ಞಾನವೂ ಸಾಲದು. ಪಂಚಭೇದವನ್ನು ತಾರತಮ್ಯ ವನ್ನು ಅರಿತ ಬ್ರಾಹ್ಮಣನೇ ಮೋಕ್ಷಾಧಿಕಾರಿ".

ಬರೇ ಪಂಚಭೇಧ ತಾರತಮ್ಯ ಸಾಲದು ವೈರಾಗ್ಯವೂ ಬೇಕು ಮೋಕ್ಷಕ್ಕೆ".

"ಜೀವೇಶರ ಭೇಧ, ಜೀವಜೀವರ ಭೇಧ, ಜೀವ ಜಡ ಭೇಧ, ಜಡ ಜಡ ಭೇಧ – ಜೀವ ಜಡ ಭೇಧ – ಈ ಮೂಲಕ ಜೀವ ಜಡವರ್ಗಕ್ಕೆ ನಿಯಾಮಕರಾದವರು ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠ ಶ್ರೀಹರಿ ಎಂದು ಅರಿತು ನಿಯತ ಗುರುಗಳಿಂದ ಉಪದೇಶ ಪಡೆದು ಶ್ರೀಹರಿಯಲ್ಲಿಯೂ ಅವನ ಪರಿವಾರವೆಂದರಿತು ಪರಶುಕ್ಲತ್ರಯರಲ್ಲಿಯೂ ಯಥಾಯೋಗ್ಯ ಭಕ್ತಿ ಪುರಸ್ಸರ ಧ್ಯಾನೋಪಾಸನೆಯನ್ನು ಮಾಡಿ 'ಅಪರೋಕ್ಷ ಜ್ಞಾನಿ ಯಾಗಿ' ಪ್ರಾರಬ್ಧ ಕರ್ಮವನ್ನು ಕಳೆದುಕೊಂಡ ಮೇಲೆ ಮೋಕ್ಷಾಧಿಕಾರಿ ಯಾಗುತ್ತಾನೆ ಜೀವ".

"ಪ್ರಾರಬ್ಧ ಹೋಗತಕ್ಕದ್ದಲ್ಲ. ಅನುಭವಿಸಬೇಕು. ಅಪರೋಕ್ಷ ಜ್ಞಾನಿಯಾದಾಗ ಜೀವನ್ಮುಕ್ತನಾಗುತ್ತಾನಷ್ಟೆ. ಅನಂತರ ಸಂಚಿತ ಆಗಾಮಿ ಗಳ ಭಾಧೆ ಇರುವುದಿಲ್ಲ. ಅಂತು ಅಪರೋಕ್ಷ ಜ್ಞಾನ – ಪ್ರಾರಬ್ಧ ಕ್ಷಯ– ಅನಂತರ ಮುಕ್ತಿ".

"ಜಗತ್ತು ಸತ್ಯ. ಚೇತನರು – ರಮಾದಿ ಪರ್ಯಂತ ಶ್ರೀಹರಿಯ ದಾಸರು ಇವರಲ್ಲಿ ತಾರತಮ್ಯವಿದೆ. ವಾಯು ಜೀವೋತ್ತಮ. ವಿಷಯ

ಸುಖಗಳು ಅನಿತ್ಯ. ಹೀಗರಿತು, ಸ್ವಸ್ವಯೋಗ್ಯ ರೀತಿಯಲ್ಲಿ ಸ್ವೋತ್ತಮರಿಂದ ಉಪದೇಶ ಪಡೆದು, ಕೊನೆಯಲ್ಲಿ ಶ್ರೀಹರಿಯ ಕೃಪೆಯಿಂದ ನಿಯತ ಗುರುಗಳು ಬಂದು ಬಿಂಬಮೂರ್ತಿಯ ಧ್ಯಾನೋಪಾಸನೆಯನ್ನು ಉಪದೇಶಿಸಲು, ಅದರಂತೆ ಸಾಧನೆಯನ್ನು ಮಾಡಿಕೊಳ್ಳುತ್ತಿರುವ ಮುಕ್ತಿಯೋಗ್ಯನು ಮಾತ್ರ ಲಿಂಗ ದೇಹಭಂಗವಾದಾಗ ಮುಕ್ತನಾಗುತ್ತಾನೆ".

ಶ್ರೀ ವ್ಯಾಸರಾಜ ಗುರುಸಾರ್ವಭೌಮರು ನಗುತ್ತ ತಲೆ ಹಾಕುತ್ತಿದ್ದರು. ಪುರಂದರದಾಸರು– ಕನಕದಾಸರು– ವಾದಿರಾಜರು ಮುಂತಾದವರೆಲ್ಲಾ ಕುಳಿತು ಕುತೂಹಲದಿಂದ ಪಂಡಿತೋತ್ತಮರ ಅಭಿಪ್ರಾಯಗಳನ್ನು ಕೇಳುತ್ತಿದ್ದರು. ಸ್ವಾಮಿಗಳು, "ಸರಿ, ಈಗ ಈ ಸಭೆಯಲ್ಲಿರುವವರಲ್ಲಿ ಯಾರು ಮೋಕ್ಷಕ್ಕೆ ಅಧಿಕಾರಿಗಳಾಗುವಿರಿ ? ಯಾರು ಮುಕ್ತರಾಗುವಿರಿ ? ಹೇಳಿ" ಎಂದು ಪ್ರಶ್ನಿಸಿದರು.

ಎಲ್ಲರು ಸ್ತಬ್ಧರಾದರು ಒಬ್ಬರ ಮುಖ ಒಬ್ಬರು ನೋಡಿಕೊಂಡು ಸುಮ್ಮನೆ ಕುಳಿತುಬಿಟ್ಟರು.

ಒಂದೆರಡುಕ್ಷಣ ಕಾದು ನೋಡಿ ಯಾರಿಂದಲೂ ಉತ್ತರ ಬಾರದಿರಲು ಸ್ವಾಮಿಗಳೇ ಕೇಳಿದರು– "ಆ ಕನಕದಾಸನನ್ನು ಕೇಳೋಣವೆ ?

"ಕನಕ– ಯಾರು ಮುಕ್ತಿಗೆ ಹೋಗುವವರು," ಎಂದು ಕೇಳಿದರು.

ಕನಕದಾಸರು– "ಸ್ವಾಮಿ ಇದು ಸಾಮೂಹಿಕವಾಗಿ ಹೇಳಲು ಬರುವುದಿಲ್ಲ" ಎಂದರು. "ಅಂದರೆ– ಒಬ್ಬೊಬ್ಬರನ್ನಾಗಿ ತೋರಿಸಲೆ ? ಇವರು ಹೋಗುವರೆ ? ಇವರು ಹೋಗುವರೆ ?"– ಎಲ್ಲರಿಗೂ ದಿಗಿಲು. ಎಲ್ಲರ ಎದೆ ಡವಡವ ಬಡಿದುಕೊಳ್ಳುತ್ತಿತ್ತು. ಕನಕದಾಸರು ಯಾರನ್ನು ತೋರಿಸಿದರೂ" ಉಹ್ಞೂಂ, ಉಹ್ಞೂಂ" ಅನ್ನುತ್ತಿದ್ದರು. ಕ್ರಮೇಣ ಎಲ್ಲರಿಗೂ

ಇದ್ದ ಭಯ ದೂರವಾಯಿತು. "ಈತ ಇನ್ನೇನು ಹೇಳಿಯಾನು" ಎಂದು ತಾತ್ಸಾರಭಾವವು ಮೂಡಲೂ ಪ್ರಾರಂಭವಾಯಿತು.

"ವ್ಯಾಸರಾಯರು ಪಂಡಿತರ ಸರದಿ ಮುಗಿದಮೇಲೆ ಅಪರೋಕ್ಷ ಜ್ಞಾನಿಗಳೆಂದು ಪ್ರಸಿದ್ಧರಾದ ಪುರಂದರದಾಸರನ್ನು ತೋರಿಸಿ "ಇವರು" ಎಂದು ಪ್ರಶ್ನಿಸಿದರು. ಅದಕ್ಕೂ ಕನಕದಾಸರ ಉತ್ತರ- ಉಹ್ೂಂ"

ವಾದಿರಾಜರನ್ನು ತೋರಿಸಿ– "ಇವರು ?"

ಕನಕದಾಸರು– "ಇನ್ನೂ ಕಾಯಬೇಕು– ಈಗಲೇ.... ಉಹ್ೂಂ"

ಪಂಡಿತರ ತಾತ್ಸಾರ ಭಾವನೆ ಈಗ ಕೋಪವಾಗಿ ಪರಿಣಮಿಸಿತ್ತು. ಗುಸುಗುಸು ಮಾತನಾಡಿಕೊಳ್ಳತೊಡಗಿದರು. ಈತನ ದೃಷ್ಟಿಯಲ್ಲಿ ವಾದಿ ರಾಜರು, ಪುರಂದರದಾಸರುಕೂಡ ಮುಕ್ತಿಗೆ ಅಯೋಗ್ಯರು ಎಂದಮೇಲೆ ಈತನಿಗೇನು ಗೊತ್ತಿದೆ ?"

"ಅಯ್ಯೊ ಬಾಯಿಗೆ ಬಂದಂತೆ ಹೇಳುವುದುಇವರ ಸ್ವಭಾವ".

"ಸ್ವಭಾವ ಅಲ್ರೀ ಸ್ವಾಮಿಗಳು ಕೊಟ್ಟ ಸಲಿಗೆ ಹಾಗೆಮಾಡಿದೆ".

"ಸಲಿಗೆ ಅಂತೆ – ಅಲ್ಪಗೆ ಗಾದೆಯಂತೆ" –

"ಅಲ್ಲಿರಿ ನಾಯೀನ ದಂಡಿಗೆ –"

"ಸುಮ್ಮನಿರಿ ಅಲ್ಲಿ ನೋಡಿ" ; ಕೇಳಿ.

ವ್ಯಾಸರಾಯರು ತಮ್ಮ ಎದೆಯ ಮೇಲೆ ಕೈಯಿಟ್ಟುಕೊಂಡಿದ್ದರು. ಪಂಡಿತರ ದೃಷ್ಟಿ ಆಕಡೆ ಹೊರಳಿತು.

"ನಾನು?" – ಪ್ರಶ್ನಿಸಿದರು.

ಕನಕದಾಸರು ಕೈಮುಗಿದು "ಒಡೆಯ ಏನುಹೇಳಲಿ ? – ಊಹೂಂ" ಅಂದುಬಿಟ್ಟರು.

ಸಭೆಯ ವಾತಾವರಣ ಅಸಹನೀಯ ಕ್ಷೋಭೆಯಿಂದ ಕೂಡಿ ದ್ದಾಯಿತು.

"ಸ್ವಾಮಿಗಳಿಗೂ ಅವಮಾನ !"

"ಬೊಗಳಲಿ ಬಿಡು."

"ಕುಲವನ್ನು ನಾಲಿಗೆ ಹೇಳುವುದು."

"ಸ್ವೋತ್ತ್ರಮ ದ್ರೋಹ."

"ಅದಕ್ಕು ಮಿತಿ ಇದೆಯೇ !"

"ಸ್ವಾಮಿಗಳು ಅಲ್ಲ ಅಂದ ಮೇಲೆ ನಮ್ಮ ನಿಮ್ಮ ಪಾಡೇನರಿ ?"

"ಸುಮ್ಮನೆ ಬಿಡಬಾರದು. ಅಂಕೆ ಇಲ್ಲದೆ ಕೊಬ್ಬಿರುವ ಈತನಿಗೆ ತಕ್ಕ ಶಾಸ್ತಿಯಾಗಬೇಕು."

ಸ್ವಾಮಿಗಳು ಘಂಟೆಯನ್ನು ಭಾರಿಸಿದರು. ಎಲ್ಲರೂ ಸುಮ್ಮನಾದರು ಸ್ವಾಮಿಗಳು "ನೀನು ?" ಎಂದು ಕನಕದಾಸರನ್ನು ಕೇಳಿದರು.

ಕನಕದಾಶರು – "ನಾನು ! ನಾನು ಹೋದರೆ ಹೋಗಬಹುದು."– ಎಂದರು.

ಮತ್ತೆ ಪ್ರಾರಂಭವಾಯಿತು ಕೋಲಾಹಲ.

"ನೋಡಿದಿರಾ ಇವನು ಹೋಗುತ್ತಾನಂತೆ.... ..."

"ಈ ಕುರುಬ ಮುಕ್ತಿಗೆ ಹೋಗಬಹುದು.... ..."

"ಹೌದ್ರಿ-ಅಪರೋಕ್ಷ ಜ್ಞಾನಿಗಳಿಗೆ ಮುಕ್ತಿ ಇಲ್ಲ !– ಕುರುಬಂಗೇ ಮುಕ್ತಿ !"

"ಕಾಲಧರ್ಮಸ್ವಾಮಿ."

"ದಿಟ್ಟತನ-ಸೊಕ್ಕು."

ಮತ್ತೆ ಘಂಟೆ ಬಾರಿಸಬೇಕಾಗಿ ಬಂತು. ಸ್ವಾಮಿಗಳು ಕನಕದಾಸರನ್ನು ಮತ್ತೆ ಪ್ರಶ್ನಿಸಿದರು. "ನಾನು ಹೋದರೆ ಎಂದೆಯಲ್ಲ, ಏಕೆ ? ಸಂಶಯವೆ ?"

ಕನಕದಾಸರು "ಸಂಶಯವೇನಿಲ್ಲ **ನಾನು** ಹೋಗಬೇಕು."

ಸ್ವಾಮಿಗಳು "ನಾನು ಹೋಗಬೇಕು ಅಂದರೆ?"

ಕನಕದಾಸರು – "**ನಾನು** – ಅಹಂಕಾರ ಮಮಕಾರ ಹೋಗಬೇಕು. ಶ್ರೀಹರಿ ಎಲ್ಲಕ್ಕೂ ಕಾರಣ – ಕಾಯಜಪಿತ–ಮಾಯರಹಿತ–ಕಾಗಿನೆಲೆಯಾದಿ ಕೇಶವರಾಯ ನೀನಿಲ್ಲದೆ ನರರು ಸ್ವತಂತ್ರರೇ ? ತನು ನಿನ್ನದು –ಜೀವನ ನಿನ್ನದು ಎಂದು ಸರ್ವಸಮರ್ಪಣಾ ಭಾವದಿಂದ ಅನುಭವ ಪಡೆದು **ನಾನು** ಎಂಬುದು ಸರ್ವಥಾ ಅಳಿದಾಗ ಮಾತ್ರ ಮುಕ್ತರಾಗಬಹುದು".

" 'ನಾಹಂ ಕರ್ತಾ ಹರಿಃ ಕರ್ತಾ' ಎಂಬುದನ್ನೇ ಹೇಳುತ್ತಿದ್ದಾನೆ."

"ಹೊಸದೇನೂ ಇಲ್ಲ. ಪ್ರಾಕೃತ ಭಾಷೆಯಲ್ಲಿ ಹೇಳಿದ ಅಷ್ಟೆ."

"ಇಷ್ಟೆ ಆದರೆ ನಾವೂ ಹೇಳಬಹುದಿತ್ತು.!"

"ಯಾರು ಹೋಗುತ್ತಾರೆ ಅಂದರೆ – ಇಲ್ಲಿರೋರು ಅಂತ ಅರ್ಥಮಾಡಿಕೊಂಡಿದ್ದೆನಲ್ಲ. ಅದಲ್ಲ !"

"ಮಾತು ತಿರುಗಿಸಿಬಿಟ್ಟ. ಹೆದರಿ."

"ಸರಿಯಾದ್ದೇ ಹೇಳಿದನಲ್ಲಾ. **ನಾನು** ಅಹಂಕಾರ – ಸ್ವತಂತ್ರ ಕರ್ತಾ ಎಂಬ ಬುದ್ಧಿ ಹೋಗಬೇಕು.– ಮುಕ್ತನಾಗಲಿಕ್ಕೆ ಅಂತ"

ಪಂಡಿತ ವರ್ಗದಲ್ಲಿ ಮತ್ತೆ ಮಾತು ಪ್ರಾರಂಭವಾಯಿತು.

ಸ್ವಾಮಿಗಳು ಘಂಟೆಯನ್ನು ಬಾರಿಸಿ "ಕನಕನ ಮಾತು ನೋಡಿದಿರಾ? ಅದಕ್ಕೆ ಅವನ ಮಾತನ್ನು ಮುಂಡಿಗೆ ಅನ್ನುವುದು. ಮುಂಡಿಗೆ ಹೊರುವುದು ಕಷ್ಟ. ಕನಕನ ಮಾತನ್ನು ಬಿಡಿಸುವುದು ಕಷ್ಟ". ಎಂದು ತಿಳಿಸಿದರು.

"ಇನ್ನೊಂದು ಉಗಾಬೋಗದಲ್ಲಿ ಯಾರ್‍ಯಾರಿಗೆ ಎಷ್ಟು ಜನ್ಮ ಅಂತ ಬಂದಿದೆಯಂತೆ." ಶ್ರೀಪತಿ ಕೇಳಿದ.

ದಾಸರು– "ಹೌದಪ್ಪ ಅದರಲ್ಲಿ ವ್ಯಾಸರಾಯರಿಗೆ ಮೂರು ಜನ್ಮ, ಪುರಂದರದಾಸರಿಗೆ ಎರಡು ಜನ್ಮ – ಮುಂತಾಗಿ ಹೇಳಿದ್ದರಂತೆ. ನನಗೆ ಅದು ಸಿಕ್ಕಿಲ್ಲ. ಅಂತು ಕನಕದಾಸರ ಮಾತಿನ ಮರ್ಮ ಆಳವಾಗಿ ವಿಚಾರಮಾಡಿ ತಿಳಿದುಕೊಳ್ಳಬೇಕು ಅಷ್ಟೆ" ಅಂದರು.

"ನನ್ನದೊಂದು ಪ್ರಶ್ನೆ"–ಅನಿಲೇಶ ಎದ್ದು ನಿಲ್ಲುತ್ತಾ ಗಟ್ಟಿಯಾಗಿ ಹೇಳಿದ.

"ಏನಪ್ಪ ?" ದಾಸರು ಕೇಳಿದರು.

"ಕನಕದಾಸರು ಕುರುಬರು ..........."

"ಅಲ್ಲ ಕ್ಷತ್ರಿಯರು............" ಶ್ರೀಪತಿ ಬಾಯಿ ಹಾಕಿದ.

"ಅಂತು ಬ್ರಾಹ್ಮಣರಲ್ಲ..........." ಅನಿಲೇಶ.

"ಆಗಲಿ. ನೀನು ಏನು ಕೇಳಬೇಕೆಂದಿರುವೆ ?"– ದಾಸರು

"ಅವರನ್ನು ಬ್ರಾಹ್ಮಣರ ಗೋಷ್ಠಿಯಲ್ಲಿ ಸೇರಿಸಿಕೊಂಡದ್ದು, ಅದರಲ್ಲೂ ವ್ಯಾಸರಾಯರು ಸೇರಿಸಿಕೊಂಡದ್ದು ಸರಿಯೆ?"– ಸ್ಪಷ್ಟಪಡಿಸಿದ.

ದಾಸರು ಮುಗುಳ್ನಗೆ ನಕ್ಕರು. ಅನಂತರ– "ಅನಿಲೇಶ ! ನಿನ್ನ ಪ್ರಶ್ನೆ ಸರಿಯೆ. ವ್ಯಾಸರಾಯರು ವರ್ಣಾಶ್ರಮ ಧರ್ಮದ ಕಟ್ಟುಪಾಡನ್ನು

ಪಾಲಿಸುವ ಹೊಣೆಹೊತ್ತ ಧರ್ಮಪೀಠದಲ್ಲಿದ್ದ ದೊಡ್ಡ ಸ್ವಾಮಿಗಳು. ಅವರ ಜೊತೆಯಲ್ಲಿ ವಾದಿರಾಜರು ಇನ್ನೊಬ್ಬ ದೊಡ್ಡಸ್ವಾಮಿಗಳೂ ಇದ್ದರು. ಕನಕನಂತೆಯೆ ದೈವಾನುಗ್ರಹದಿಂದ ಎಲ್ಲವನ್ನು ತ್ಯಾಗವಾಡಿ ದಾಸ ರಾದವರು ಪುರಂದರದಾಸರಾಗಿದ್ದರು. ಅವರು ಬ್ರಾಹ್ಮಣರೆ. ಇವರೆಲ್ಲ ಇದ್ದೂ ತಮ್ಮ ಮಧ್ಯದಲ್ಲಿ ಒಬ್ಬ ಕುರುಬನನ್ನು ಹೇಗೆ ಸೇರಿಸಿ ಕೊಳ್ಳುತ್ತಿದ್ದರು?"

"ವಜ್ರ ಅಂದರೇನು ? ವಜ್ರ ಎಲ್ಲಿ ಸಿಕ್ಕುತ್ತೆ ಹೇಳು ?"

"ಇದ್ದಿಲು"

"ಅದು ಕಲ್ಲಿದ್ದಲು ಗಣಿಯಲ್ಲಿ"

"ಅದೂ ಒಂದು ಇದ್ದಿಲು"–

"ಸರಿ ಸರಿ ಅದು ಇದ್ದಿಲು–ಕಲ್ಲಿದ್ದಲ ಗಣಿಯಲ್ಲಿ ಸಿಕ್ಕಿತು ಎಂದು ಯಾರಾದರೂ ಎಸೆಯುತ್ತಾರೆಯೆ ? ಅಂತೆಯೆ ಕನಕದಾಸ ಬ್ರಾಹ್ಮಣನಲ್ಲ ಎಂದು ದೂರವಿಡಲು ಸಾಧ್ಯವೆ ? ಮಹಾಜ್ಞಾನಿಗಳು ವಾಗ್ಗೇಯಕಾರ, ಕವಿ, ಉಚ್ಚಕೋಟಿಯ ಅನುಭಾವಿ. ಆದ್ದರಿಂದ ಮಹಾಮಹಿಮೆಗಳಿದ್ದಲ್ಲಿ ಜಾತಿ ಗೌಣವಾಗುತ್ತೆ. ಗುಣ ಮುಖ್ಯವಾಗುತ್ತೆ. ಹೆಣ್ಣು ಗಂಡು ಕೊಟ್ಟು ತಂದು ಮಾಡುವಾಗ ಜಾತಿವಿಚಾರ ಇರಬೇಕು. ಇವರೆಲ್ಲರು ವಿರಕ್ತ ಶಿಖಾಮಣಿಗಳು, ಇವರಿಗೆ ಜಾತಿಗೊಡವೆ ಏನು ಬಂತು. ಒಟ್ಟು ಸೇರಿ ಹಾಡುವುದು–ಪಾಡುವುದು ಅವರಂಥ ಸಾಧುಸನ್ಯಾಸಿಗಳಿಗೆ ನಮ್ಮ ದಿನನಿತ್ಯದ ನಿಯಮಗಳು ಹೊಂದುವುದಿಲ್ಲ" – ದಾಸರು ಸ್ಪಷ್ಟಪಡಿಸಿದರು.

"ಕನಕದಾಸರು ನಮ್ಮ ತಿರುಪತಿಗೂ ಬಂದಿದ್ದರಾ ?" – ಸುಶೀಲ ವಿಷಯವನ್ನು ಬದಲಾಯಿಸಿ ಕೇಳಿದಳು.

"ದಾಸರೇ ದಯವಿಟ್ಟು ಒಂದು ಪ್ರಶ್ನೆ – ಕನಕದಾಸರು ಇಲ್ಲಿಗೆ ಬಂದಿದ್ದರೆ ?"

ದಾಸರು – "ಏನಪ್ಪ ಅಖಿಲೇಶ ದಯವಿಟ್ಟು ಕೇಳಿದ ಪ್ರಶ್ನೆಯು ಇದು ?"

ಎಲ್ಲರೂ ಗೊಳ್ಳನೆ ನಕ್ಕಾಗ - ದಾಸರೆ ಮುಂದುವರಿದು "ದಯವಿಟ್ಟು ಉತ್ತರ ಹೇಳಿ ನನ್ನದೊಂದು ಪ್ರಶ್ನೆ ಅಂತ ಅಲ್ಲವಾ ನಿನ್ನ ಅಭಿಪ್ರಾಯ. ಸರಿಯಾಗಿ ಯೋಚಿಸಿ ವಾಕ್ಯ ರಚನೆ ಮಾಡಬೇಕು. ಇಲ್ಲಿಗೆ ಅಂದರೆ ತಿರುಪತಿಗೆ ಕನಕದಾಸರು ಬಂದಿದ್ದರು. ಕೆಲವು ಕಾಲ ಇಲ್ಲೇ ಇದ್ದರು. ಅವರ ದೇವರನಾಮಗಳಿಂದ ಇದು ಗೊತ್ತಾಗುತ್ತದೆ. ಅದರ ಬಗ್ಗೆ ಸಾಕಷ್ಟು ಕಿಂವದಂತಿಗಳೂ ಇವೆ.

"ಅದೇನು ಕಿಂವದಂತಿ ಇವೆ ?"

"ಅದೇನು ಕಿಂವದಂತಿ ಹೇಳಿ ದಾಸರೆ. ದಯವಿಟ್ಟು"– ಸುಶೀಲ ಕೈಮುಗಿದು ಕೇಳಿಕೊಂಡಳು.

"ಒಮ್ಮೆ ಕನಕದಾಸರಿಗೆ ಸ್ವಪ್ನದಲ್ಲಿ ನಮ್ಮ ವೆಂಕಟರಮಣಸ್ವಾಮಿ ಕಾಣಿಸಿಕೊಂಡು 'ಕನಕ ! ನನ್ನ ಮದುವೆಗೆ ಬಾರಯ್ಯ' ಅಂತ ಕರೆದನಂತೆ, ಇಲ್ಲಿ ಆಗಿನ ಕಾಲದಲ್ಲಿ ಮಹಂತ ಎಂಬುವರಿದ್ದರು. ಅವರದ್ದೆ ಆಡಳಿತ ಇಲ್ಲಿತ್ತು. ಮಹಂತನಿಗೂ ಸ್ವಪ್ನವಾಯಿತಂತೆ 'ನಾಳೆ ನನ್ನ ಭಕ್ತ ಬರುತ್ತಾನೆ ಅವನಿಗೆ ತಕ್ಕ ಸ್ವಾಗತ ಸತ್ಕಾರ ಮಾಡು' ಅಂತ.

"ಚೆನ್ನಾಗಿದೆ ಕಥೆ. ಬಹಳ ಅದ್ದೂರಿಯಿಂದ ಸ್ವಾಗತಿಸಿರಬೇಕು. ದೇವರೇ ಹೇಳಿದಮೇಲೆ"– ಅನಿಲೇಶ ಹೇಳಿದ.

"ಅದ್ದೂರಿ ಸ್ವಾಗತಕ್ಕೆ ಸಿದ್ಧತೆಗಳಾದವು. ಗೋವಿಂದರಾಜ ಪಟ್ಟಣದಿಂದಲೆ ಸಕಲ ಮರ್ಯಾದೆಗಳೊಡನೆ ಎದುರುಗೊಂಡು ದಾಸರನ್ನು ಕರೆತರಲು ಮಹಂತರು ಹೊರಟರು. ಆದರೆ ಮಹಂತರಿಗೆ ಆ ಭಕ್ತ ಯಾರೆಂದು ತಿಳಿಯಲೇ ಇಲ್ಲ".

"ಅಂದರೆ ಏನಾಯ್ತು?" –ನಾಲ್ಕಾರು ದನಿಗಳು ಏಕಕಾಲದಲ್ಲಿ ಕೇಳಿಸಿದವು.

"ಕನಕದಾಸರನ್ನು ಮಹಂತರು ಮೊದಲು ನೋಡಿರಲಿಲ್ಲ. ಸ್ವಪ್ನದಲ್ಲಿ ಸ್ವಾಮಿ ಶ್ರೀನಿವಾಸ ಹೆಸರನ್ನು ಮಾತ್ರ ಹೇಳಿದ್ದ. ಆದರೆ ಹೆಸರನಿಂದಲೇ ಒಬ್ಬರನ್ನು ಸ್ವತಃ ಹೇಗೆ ಗುರುತಿಸಲು ಸಾಧ್ಯ ? ಅವರು ಮಹಾತ್ಮರು ದೊಡ್ಡ ಭಕ್ತರು. ಪರಮಾತ್ಮನೇ ತನ್ನ ಮದುವೆಗೆ ಕರೆದಿದ್ದಾನೆ. ಅಂದ ಮೇಲೆ ಗುರುತಿಸುವುದು ಕಷ್ಟವಾಗಲಿಕ್ಕಿಲ್ಲ. ಅವನ ದಯೆ ಇದ್ದಲ್ಲಿ ಇದೇನಸಾಧ್ಯ ಎಂದು ಮಹಂತರು ಹೊರಟಿದ್ದರು.

ಇತ್ತ ಕನಕದಾಸರು ಕಪಿಲತೀರ್ಥದಲ್ಲಿ ಸ್ನಾನಮಾಡಿ, ಒಗೆದ ಬಟ್ಟೆಯನ್ನುಟ್ಟು, ತಲೆಗೆ ಬಣ್ಣದ ಪೇಟ ಕಟ್ಟಿಕೊಂಡು, ಜೋರಾಗಿ ಹಣೆಗೆ ತಿಲಕ ತಿದ್ದಿಟ್ಟುಕೊಂಡು ತಮ್ಮ ಕೋಲು, ಕಂಬಳಿ, ತಣಿಗೆ, ಶಂಖ, ಬನವಾಸಿ ಇವನ್ನೆಲ್ಲ ಎತ್ತಿಕೊಂಡು, ಏಕನಾದವನ್ನು ಬಾರಿಸುತ್ತಾ ಪರಮಾತ್ಮನನ್ನು ಕೊಂಡಾಡುತ್ತಾ ಹೊರಟಿದ್ದರು. ಗಾಳಿಗೋಪುರ ಹತ್ತುವಷ್ಟರಲ್ಲಿ ಅವರು ಹಾಡುವುದನ್ನು ನಿಲ್ಲಿಸಿ ಮಾನಸಿಕಪೂಜೆಯಲ್ಲಿ ತೊಡಗಿದ್ದರು.

"ಅಷ್ಟು ಹೊತ್ತಿಗೆ ಮಹಂತರೂ ಪರಿವಾರ ಪರಿಕರ ಸಹಿತ ಅಲ್ಲಿಗೆ ಬಂದಿದ್ದರು. ದಾರಿಯಲ್ಲಿ ಕನಕದಾಸರನ್ನು ನೋಡಿದಾಗ ಇವರಿಗೆ ಬರಲಿರುವ ಕನಕದಾಸರ ಪರಿಚಯವಾದರೂ ಇದ್ದೀತು. ಇವರೆ ಕನಕದಾಸರಾಗಿದ್ದರಂತೂ ಸರಿಯೆ ಎಂದುಕೊಂಡರು".

ಮಹಂತ – "ಏನ್ರಿ ಸ್ವಾಮಿ ! ನೀವು ಯಾರು ?"

ಕನಕದಾಸರು – "ಯಾರೆಂದು ಉಸಿರಲಪ್ಪ ! ಆ ಜಗನ್ನಾಥ ಈ ನರರೂಪ ಕೊಟ್ಟಿದ್ದಾನೆ. ಈ ಇಂದ್ರಿಯಗಳ ಸೂತಕ ತಪ್ಪಿಲ್ಲ. ಎಲ್ಲಿಂದ ಬಂದೆ ಅನ್ನೋದೇ ಗೊತ್ತಿಲ್ಲ ! ಇಂಥ ಅಜ್ಞಾನಿ. ನಾನು ಯಾರು ಎಂದು ಹೇಳಿಕೊಳ್ಳಲಿ ?"

ಸುಶೀಲ – "ಯಾತರವನೆಂದುಸಿರಲಿ | ಜಗ
ನ್ನಾಥ ಮಾಡಿದ ನೊಂದ ನರ ರೂಪವಯ್ಯ ||

ಎಂಬ ದೇವರ ನಾಮ ಆಗಲೆ ಬರದದ್ದಾ ದಾಸರೆ ?

"ಸುಶೀಲ ಪಲ್ಲವಿ ಚೆನ್ನಾಗಿ ಹೇಳಿದೆ. ಪೂರ್ತಿ ದೇವರ ನಾಮ ಬರತ್ತೊ ?"

"ಬರುತ್ತೆ. ಹಾಡಲೆ ?"

"ಬೇಡ ಅದಿರಲಿ. ಏನಂದೆ – ಆಗ ಬರದದ್ದೆ – ಇಲ್ಲವಮ್ಮ – ದಾಸರು ಬರೆಯುತ್ತಿರಲಿಲ್ಲ. ಸಮಯ ಸ್ಫೂರ್ತಿಯಿಂದ ನುಡಿಯುತ್ತಿದ್ದರು. ಹಾಡುತ್ತಿದ್ದರು. ನಲಿಯುತ್ತಿದ್ದರು. ಆ ಸಂದರ್ಭಕ್ಕೇ ಹೊಂದುವಂತಿದೆ. ಯಾವಾಗ ಹಾಡಿದರೋ ಅಂದರೆ ಯಾವ ಸಂದರ್ಭದಲ್ಲಿ ಹಾಡಿದರೊ ಅದನ್ನು ಹೇಳಲು ಆಧಾರವೇನೂ ಇಲ್ಲ "

"ಮುಂದೇನಾಯಿತು ?" –ಆರ್ಕೇಶ ಕೇಳಿದ.

"ಮುಂದೇನಾಗುವುದು. ಮಹಂತರಿಗೆ ಇದೇನು ಅರ್ಥವಾಗಲಿಲ್ಲ. ಅವರಿಗೆ ಅಷ್ಟು ಕನ್ನಡವೂ ಬರುತ್ತಿರಲಿಲ್ಲ. ಆದ್ದರಿಂದ ಸರಿ ಸರಿ. ನೀವು ಕನಕದಾರನ್ನು ನೋಡಿದ್ದಿರಾ ? ಎಂದು ಪ್ರಶ್ನಿಸಿದರಂತೆ. ಹೌದಪ್ಪ ಅತನನ್ನು ಬಲ್ಲೆ, ಎಂದರಂತೆ – ಕನಕದಾಸರು ಹಾಗಾದರೆ ಎಲ್ಲಿದ್ದಾರೆ ?

ಗೊತ್ತೆ ?" ಎಂದು ಮಹಂತರು ಕೇಳಿದರಂತೆ. ಗೊತ್ತಪ್ಪ 'ಗೊತ್ತು ಆತ ಮುಂದೆ ಹೋದವರ ಹಿಂದೆ ಇದ್ದಾನೆ. ಹಿಂದೆ ಬರುವವರಿಗಿಂತ ಮುಂದೆ ಇದ್ದಾನೆ' ಎಂದು ಹೇಳಿ ನಕ್ಕುಬಿಟ್ಟನಂತೆ."

"ಆಮೇಲೆ ?" – ಉಷಾ ಕೇಳಿದಳು.

"ಆಮೇಲೇನು ! ಇವನು ಯಾರೋ ಹುಚ್ಚ ಇರಬೇಕು ಎಂದು ತಿಳಿದು ಮಹಂತರು ಹೊರಟುಹೋದರು. ಅತ್ತ ಮಹಂತರಿಗೆ ಕನಕದಾಸ ಯಾರೆಂದು ತಿಳಿಯಲಿಲ್ಲ. ಇತ್ತ ಕನಕದಾಸರನ್ನು ಮಾತನಾಡಿಸುವವರೆ ಇರಲಿಲ್ಲ. ವೈಶಾಖ ಶುದ್ಧ ದಶಮಿ. ಶ್ರೀನಿವಾಸನ ಕಲ್ಯಾಣ ಮಹೋತ್ಸವ. ನೋಡಲು ಸಾವಿರಾರು ಜನ ಸೇರಿದ್ದರು ಆ ನೂಕು ನುಗ್ಗಲಿನಲ್ಲಿ ಕನಕದಾಸರನ್ನು ಕೇಳುವವರಾರು ? ದೇವರ ದರ್ಶನ ಸಹ ಸಿಗಲಿಲ್ಲ. ಹೊಟ್ಟೆಗೆ ತುತ್ತು ಕೂಳೂ ಸಿಗಲಿಲ್ಲ. ಹಸಿವೆ ಆಯಾಸದಿಂದ ಬಳಲಿ ನಿಂದಾಸ್ತುತಿಗೆ ಪ್ರಾರಂಭಿಸಿದರು. ಎದುರಿನಲ್ಲಿ ಒಂದು ಕಲ್ಲು ಮಂಟಪದಲ್ಲಿ ಕುಳಿತು ಹಾಡುತ್ತಿದ್ದಾಗ ಹಾಗೇ ಹಾಗೇ ನಿದ್ರೆ ಬಂದಿತು. ಸ್ವಪ್ನದಲ್ಲೂ ಸಹ "ಏ ಶೆಟ್ಟಿ ಮದುವೆಗೆ ಬಾ ಎಂದು ಕರೆದು ಬಂದವರಗೊಡವೆ ಇಲ್ಲದೆ ಮಜಾ ಮಾಡುತ್ತಿರುವೆಯ ? ಮುಂತಾಗಿ ಹೇಳಿಕೊಳ್ಳುತ್ತಲೆ ಇದ್ದರು."

ಸುಶೀಲ ಎದ್ದು ನಿಂತಳು.

"ಏನಮ್ಮ ಸುಶೀಲ ?" ದಾಸರು ಕೇಳಿದರು.

"ದಾಸರೆ !

ಬಂದೆವಯ್ಯ ಗೋವಿಂದ ಶೆಟ್ಟಿ | ನಿನ್ನ
ಹರಿವಾಣ ತೀರ್ಥಪ್ರಸಾದ ಉಂಟೆನಲಾಗಿ ||ಪ||

ಅಪ್ಪವು ಅತಿರಸ ತುಪ್ಪವು ಚಿನಿಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪರೂಪವಾದ ಕಜ್ಜಾಯ ರಾಶಿಗಳನ್ನೆಲ್ಲ
ಛಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ ||
ಎಂಬ ಒಂದು ಹಾಡು ಇದೆಯಲ್ಲ."

"ಹೌದಮ್ಮ ಹಾಡು ಇದೆ. ನೀನು ಚೆನ್ನಾಗಿ ಹೇಳಿದೆ. ದಾಸರೇನಮ್ಮ ಎದ್ದರೆ ಕೂತರೆ ಆಶುಕವಿಗಳು – ಹಾಡುತ್ತಿದ್ದರು. ಸ್ವಪ್ನದಲ್ಲಿ ಅದೇ ಹಾಡನ್ನೋ ಅಂಥದೆ ಹಾಡನ್ನೋ ಹಾಡಿರಬಹುದು.... ......ಅಂತು ರಾತ್ರಿ ಹನ್ನೆರಡರ ಹೊತ್ತಿಗೆ ಅತಿ ಆತ್ಮೀಯವಾಗಿ ಪ್ರೀತಿಯಿಂದ 'ಕನಕ ಕನಕ' ಎಂದಂತೆ ಕೇಳಿಸಿತಂತೆ.

"ಎದ್ದು ಕುಳಿತು ಕಣ್ತೆರೆದು ನೋಡಿದರೆ ಯಾವನೋ ಒಬ್ಬ ಮಂದಿರದ ಸಮವಸ್ತ್ರ ಧರಿಸಿದ್ದಾನೆ. 'ಸ್ವಾಮಿ' ಅಪ್ಪ–ಅತಿರಸ–

"ಈಗ ದೇವರನಾಮದಲ್ಲಿ ಸುಶೀಲ ಹೇಳಿದಳಲ್ಲಪ್ಪ–ಅಂಥದ್ದೆಲ್ಲ ಇತ್ತು'.

ಪೊಂಗಲ್-ಲಾಡು, ಬಿಸಿ ಬಿಸಿ ಘಮಘಮಿಸುವ ಹಾಲು ಎಲ್ಲಾ ತಂದಿಟ್ಟು – 'ಪ್ರಸಾದ ತೆಗೆದುಕೊಳ್ಳಿ' ಎಂದು ವಿನಯದಿಂದ ನುಡಿದ – ದಾಸರಿಗೆ ಹಸಿವೆಯಾಗಿತ್ತು. ಕೇಳಬೇಕೆ, ಕಂಠಮಟ್ಟ ತಿಂದರು. ತೇಗಿದರು. ಕೈತೊಳೆದುಕೊಂಡು ಬರುವಷ್ಟರಲ್ಲಿ ಒಂದು ಅತಿ ಅಮೂಲ್ಯವಾದ ಉಡುಗೋರೆಯನ್ನು ಕೊಟ್ಟು 'ಮದುವೆಉಡುಗೊರೆ ಸ್ವೀಕರಿಸಬೇಕು' ಅಂದನಂತೆ ಆ ಸೇವಕ.

"ದಾಸರು ಪ್ರೀತಿಯಿಂದ 'ನೀನು ಯಾರಪ್ಪ–ಏನು ಕೆಲಸ....ಏನು ಹೆಸರು' ಮೃಂತವಾಗಿ ಕೇಳಿದರಂತೆ

" 'ನಾನೇ' – ಎಂದು ಹೇಳುತ್ತಲೆ ಕಣ್ಮರೆಯಾಗಿಬಿಟ್ಟನಂತೆ.

ದಾಸರಿಗೂ ಹೊಟ್ಟೆ ತುಂಬಿತ್ತು. ಮಸಾಲೆ ಹಾಲು ಬೇರೆ ಕುಡಿದಿದ್ದರು ನಿದ್ರೆ ಬಂದಿತು. ಹೆಚ್ಚು ವಿಚಾರವನ್ನೇ ಮಾಡಲಿಲ್ಲ. ಬೆಳಿಗ್ಗೆ ಅವರನ್ನು ಎಬ್ಬಿಸಿಕೊಂಡು ನಾಲ್ಕು ಜನ ಎಳೆದು ಮಹಂತನ ಮಹಲಿಗೆ ಕರೆದುಕೊಂಡು ಹೋದಾಗಲೇ ಎಚ್ಚರವಾಯಿತು. ಅಷ್ಟು ಹೊತ್ತಿಗಾಗಲೆ ಸೂರ್ಯಹುಟ್ಟಿ ಎರಡು ತಾಸು ಆಗಿತ್ತು".

"ಏಕೆ ಎಳೆದುಕೊಂಡು ಹೋದರು ?" — ಆರ್ಕೇಶ ಕೇಳಿದ.

"ಏಕೆ ಅಂತೀಯಾ ?" ದಾಸರು ಮುಂದುವರಿಸಿದರು. "ದೇವಸ್ಥಾನ ದಲ್ಲಿ ದೇವರಿಗೆ ಉಡಿಸಿದ್ದ ಪಂಚೆ ಕಳುವಾಗಿತ್ತು, ಬೆಳಿಗ್ಗೆ ಪೂಜೆಗೆ ಬಂದ ಪೂಜಾರಿ ಮಹಂತನಿಗೆ ಸುದ್ದಿಕೊಟ್ಟ. ಎಂದೂ ಇಂಥ ಘಟನೆ ನಡೆದದ್ದಿಲ್ಲ. ಅಷ್ಟು ಪಹರೆಯಲ್ಲಿ ಕಳ್ಳತನ ಆದದ್ದು ಹೇಗೆ ? ಎಲ್ಲಾ ಕಡೆ ಹುಡಕಿಸಲೂ ಜನರನ್ನು ಅಟ್ಟಿದರು. ಒಬ್ಬ ಬಂದು ಮಹಂತನಿಗೆ ಮಾಲು ಸಹಿತ ಆಸಾಮಿ ಸಿಕ್ಕಿರುವುದಾಗಿ ತಿಳಿಸಿದ. "ಎಳೆದು ತನ್ನಿ" ಎಂದು ಮಹಂತ ಆದೇಶ ನೀಡಿ ನಾಲ್ಕು ಜನರನ್ನು ಕಳಿಸಿಕೊಟ್ಟಿದ್ದ. ಆತನನ್ನು ಕಂಡು ಕಡು ಕೋಪದಿಂದ – ದೇವರ ಸ್ವತ್ತನ್ನು ಕದಿಯಲಿಕ್ಕೆ ಇಲ್ಲಿಗೆ ಬಂದಿದ್ದಾನೆ. ಪಾಪಿ ! "ಚಗಿಯಿರಿ ನಾಲ್ಕು" ಎಂದು ಅರಚಿದ ಮಹಂತ. ಸರಿ. ನಾಲ್ಕಾರು ಜನ ಕಂಬಕ್ಕೆ ಕಟ್ಟಿ ಚಾಟಿ ಏಟು ಬಿಗಿಯಲು ಪ್ರಾರಂಭಿಸಿದರು. ದಾಸರಿಗೆ ಒಂದೊಂದು ಏಟು ಬಿದ್ದಾಗಲು ಗೋವಿಂದ – ನಾರಾಯಣ – ಶ್ರೀನಿವಾಸ ಎಂದು ಹೇಳುತ್ತಿದ್ದರು, ಒಮ್ಮೆಯಂತು ವೇಧನೆಯನ್ನು ತಾಳಲಾರದೆ ಶೇಷ ಗಿರಿವಾಸ ರಂಗಯ್ಯ । "ಆದಿಕೇಶವನೆ ರಕ್ಷಿಸಿಸೊ ರಂಗಯ್ಯ" ।

ಎಂದು ಹಂಬಲಿಸ ತೊಡಗಿದರು. ಅತ್ತ ಸೋಜಿಗವೋ ಸೋಜಿಗ ! ಶ್ರೀನಿವಾಸನ ಪ್ರತಿಮೆಯು ಮೇಲೆಬಾಸುಂಡಿ ಬಂದಿತಂತೆ ಮಹಂತನಿಗೆ ಸೂಚನೆ ಕೊಟ್ಟರು. ತಕ್ಷಣದಲ್ಲಿ ದಾಸರಿಗೆ ಹೊಡೆಯುವುದನ್ನು ಬಿಟ್ಟು

ಇವರು ಯಾರೊ ಮಹಾನುಭಾವರಿರಬೇಕೆಂದು ವಿಚಾರಿಸಿ ಗೌರವಿಸಿದರು".

"ಅಲ್ಲ ದಾಸರಿಗೆಷ್ಟು ಕಷ್ಟವಾಯಿತು ಪಾಪ" – ಕುಸುಮ ನುಡಿದಳು.

"ತಪ್ಪು ಮಾಡದಿದ್ದರೂ ದಾಸರಿಗೆ ಹೊಡೆಸಿದ್ದು ಸರಿಯೆ ?" ಅಖಿಲೇಶ ತಪ್ಪು ಮಾಡಿದ್ದು ಮಹಂತ. ವಿಚಾರ ಮಾಡಲೇ ಇಲ್ಲ. ಆತನನ್ನು ಹೊಡೆಸಿದ್ದು ತಪ್ಪು" – ಶ್ರೀಪತಿ ಹೇಳಿದ.

"ಸುಮ್ಮನೆ ಇರಿ ! ದೇವರು ತನ್ನ ಭಕ್ತರ ಕೀರ್ತಿಯನ್ನು ಬೆಳಗಿಸಲು ಇಂಥ ಆಟವಾಡುತ್ತಾನೆ. ನಾವೆಲ್ಲ ಆತ ಆಡಿಸಿದಂತೆ ಆಡುವ ಗೊಂಬೆಗಳು.

"ಮೊದಲು ಕರೆಸಿಕೊಂಡ ಗುರುತು ಹಿಡಿಯದಂತೆ ಮಾಡಿದ ಕನಕದಾಸರನ್ನು ಪರೀಕ್ಷೆ ಮಾಡಿದ. ಒಡಲಾಸೆಗೆ ಅಂದರೆ ಹೊಟ್ಟೆ ಹಸಿದು ಕಂಗೆಟ್ಟು "ಆರು ಬದುಕಿದರಯ್ಯ ಹರಿ ನಿನ್ನ ನಂಬಿ" ಎಂದು ಮೊದಲಿಸಿದಾಗ ವೃಷ್ಟಾನ್ನ ಕೊಟ್ಟು ಕಂಬಕ್ಕೆ ಕಟ್ಟಿ ಹೊಡೆಸಿದ. ದಾಸರು ಕೇಶವ ರಕ್ಷಿಸು ಎಂದು ದೇಹಾಭಿಮಾನ ಬಿಟ್ಟು ಮೊರೆಹೊಕ್ಕಾಗ ಆ ಹೊಡೆತ ತಾನುಂಡು ದಾಸರ ಕೀರ್ತಿಯನ್ನು ಜನ ಜನಿತವಾಗುವಂತೆ ಮಾಡಿದ. ಇದು 'ಭಕ್ತ ಭಗವಂತರ ಲೀಲೆ' – ದಾಸರು ವಿವರಿಸಿದರು.

ಅನಿಲೇಶ ಎದ್ದು ನಿಂತು – "ಕನಕದಾಸರ ಮಹಿಮೆ. ಇನ್ನೂ ಇರಬೇಕಲ್ಲ" ಎಂದು ಕೇಳಿದ.

"ನೋಡಯ್ಯ" ಅನಿಲೇಶ.

"ಈ ಶರೀರದೊಳಿಪ್ಪ ಕೇಶಗಳೆಲ್ಲವು
ಬೇಸರದೆಣಿಸಿ ಹೇಳಲು ಬಹುದು.
ಶೇಷಶಯನ ಕಾಗಿನೆಲೆಯಾದಿ ಕೇಶವ

ದಾಸರ ಮಹಿಮೆ ಕಾಣಲಿಕಾಗದೊ ಸ್ವಾಮಿ.,

ಎಂದು ಕನಕದಾಸರು ಹೇಳಿದ ಮಾತು ಅವರಿಗೂ ಅನ್ವಯಿಸುತ್ತದೆ. ಶ್ರೀಹರಿಯ ಮಹಿಮೆಯೂ ಅಪಾರ. ಹರಿದಾಸರ ಮಹಿಮೆಯೂ ಅಪಾರ."

"ಹಾಗಾದರೆ ಇನ್ನೊಂದು ಮಹಿಮೆ ಹೇಳಿ. ದಾಸರೆ!" ಅರ್ಕೇಶ ಕೇಳಿದ. ದಾಸರು — "ಉಡುಪಿ ಹೆಸರು ಕೇಳಿದ್ದೀಯ? ಉಡುಪಿಯನ್ನು ನೋಡಿದ್ದೀಯ?"

ಹುಡುಗರು — "ನಾನು ನೋಡಿದ್ದೇನೆ. ನಾನು ನೋಡಿದ್ದೇನೆ. ನಾನೂ ನೋಡಿದ್ದೇನೆ."

ದಾಸರು — "ಹೌದಾ? ಒಳ್ಳೆಯದು. ಅಲ್ಲಿ ಕನಕನ ಮಂಟಪ ನೋಡಿದ್ದೀಯಾ?"

ಕುಸುಮ — "ನೋಡಿದ್ದೇನೆ. ಬಂಗಾರದ ರಥ ಇಟ್ಟಿರುತ್ತಾರಲ್ಲ ಅದರ ಎದುರುಗಡೆ ಇದೆ. ಅಲ್ಲಿ ಕನಕದಾಸರೂ ಇದ್ದಾರೆ."

ಸುಶೀಲ — "ಕನಕದಾಸರಲ್ಲ; ಕನಕದಾಸರಂತೆ ಒಂದು ಪ್ರತಿಮೆ – ಸ್ಟ್ಯಾಚ್ಯೂ ಇದೆ.

ದಾಸರು — "ಹೌದು. ಅದು ಕನಕದಾಸರು ಹೀಗೆ ಇದ್ದರು ಎಂದು ಜ್ಞಾಪಿಸುವುದಕ್ಕೆ ಇಟ್ಟಿರುವ ಸ್ಟ್ಯಾಚ್ಯೂ. ಇತ್ತೀಚೆಗೆ ಇಟ್ಟಿದ್ದಾರೆ. ಅಲ್ಲಿ ಇನ್ನೇನಿದೆ?"

ಸುಶೀಲ — "ಕನಕನ ಕಿಂಡಿ ಇದೆ."

ದಾಸರು —"ಹೌದು. ಆ ಕನಕನ ಕಿಂಡಿ ಕನಕದಾಸರಿಗೆ ದರ್ಶನವನ್ನು ಕೊಡಲು ಕೃಷ್ಣನ ಮೂರ್ತಿ ತಿರುಗಿ ನಿಂತಾಗ ದೇವಸ್ಥಾನದ ಹಿಂಭಾಗದಲ್ಲಿ

ಗೋಡೆ ಬಿರುಕು ಬಿಟ್ಟಿತಂತೆ. ಅಲ್ಲಿ ಈಗ ಕಿಟಕಿ ಮಾಡಿದ್ದಾರೆ. ದೇವರು ತಿರುಗಿ ನಿಂತದ್ದು ಏಕೆ ? ಯಾರಿಗೆ ಗೊತ್ತು ?"

ಶ್ರೀಪತಿ —"ನನಗೆ ಗೊತ್ತು. ಏ ಕುರುಬ ! ನಿನಗೆ ದೇವಸ್ಥಾನದಲ್ಲಿ ಬರಲು ಬಿಡೋದಿಲ್ಲ ಅಂತ ಕನಕದಾಸರನ್ನು ಅಲ್ಲಿನ ಜನ ಅಡ್ಡಿಪಡಿಸಿದರಂತೆ. ಆಗ ಕನಕದಾಸರು ದೇವಸ್ಥಾನದ ಹಿಂದೆ ಬಂದು ಕುಳಿತು – "ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ, ಎಂದು ಭಕ್ತಿಯಿಂದ ಹಾಡಿದರಂತೆ. ಭಕ್ತನಿಗೆ ಮೆಚ್ಚಿದ ಕೃಷ್ಣ ಪಶ್ಚಿಮಕ್ಕೆ ತಿರುಗಿ ನಿಂತು ದರ್ಶನ ಕೊಟ್ಟನಂತೆ. ಆಗ ಪೂಜೆ ಮಾಡುತ್ತಿದ್ದ ಸ್ವಾಮಿಗಳು ಬಿರುಕು ಬಿಟ್ಟ ಜಾಗದಲ್ಲಿ ಕಿಟಕಿ ಇಡಿಸಿ ಕನಕನ ಕಿಂಡಿ ಎಂದು ಹೆಸರಿಟ್ಟರಂತೆ."

ಅರ್ಕೇಶ — "ಆಮೇಲೆ ಕನಕದಾಸರನ್ನು ಒಳಗೆ ಬಿಟ್ಟರಾ ?"

ದಾಸರು — ಇಲ್ಲಪ್ಪ. ವಾದಿರಾಜ ಸ್ವಾಮಿಗಳು ಕನಕದಾಸರನ್ನು ಚೆನ್ನಾಗಿ ಅರಿತಿದ್ದರು. ಇತರೆಯವರಿಗೆ ಏನು ಗೊತ್ತು ? ಈ ಮಹಿಮೆ ಯಿಂದ ಪ್ರಭಾವಿತರಾದರೂ ಸಂಪ್ರದಾಯಕ್ಕೆ ವಿರುದ್ಧ ಹೋಗುವುದು ಹೇಗೆ ?" ಕನಕದಾಸರನ್ನು ಒಳಗಡೆ ಬಿಡಲೇ ಇಲ್ಲ. ಅವರಿಗೆ ಅದು ಬೇಕೂ ಇರಲಿಲ್ಲ. ಎಲ್ಲೆಡೆ ಭಗವಂತನನ್ನು ನೋಡುವ ಮಹನೀಯರಲ್ಲವೆ ?"

ಶ್ರೀಪತಿ — "ಕನಕದಾಸರು ಸಂಪ್ರದಾಯವನ್ನು ಗೇಲಿ ಎಬ್ಬಿಸಿ ಹಾಡುಗಳನ್ನು ಬರೆದಿದ್ದಾರೆ. ಕುಲ ಕುಲ ಕುಲವೆಂದು ಕುಲದ ಹಿರಿಮೆ ಯನ್ನು ಹೇಳಿಕೊಳ್ಳುವ ಬ್ರಾಹ್ಮಣರನ್ನು ತರಾಟೆಗೆ ತೆಗೆದುಕೊಂಡಿದ್ದಾರೆ."

ದಾಸರು — "ನಿಜ ಅಪ್ಪ ನಿಜ. ಸಮಾಜ ಅಂದರೆ ಅನೇಕ ರೀತಿ ನೀತಿಯನ್ನನುಸರಿಸುವ ಜನರ ಸಮೂಹ ಅಲ್ಲವೆ ? ಅಲ್ಲಿ ಉತ್ತಮರ ಆಚರಣೆ ಯನ್ನು ನೋಡಿ ಇತರರು ಅದೇ ಆಚರಣೆಯನ್ನು ಅನುಸರಿಸಿ ತಮ್ಮಲ್ಲಿರುವ

ದುರಾಚಾರವನ್ನು ಬಿಟ್ಟು ಮೇಲೆ ಮೇಲೆ ಬರಲಿ ಎಂದು ಮಾಡಿರುವ ವ್ಯವಸ್ಥೆ ಈ ವರ್ಣ ಪದ್ಧತಿ. ಆದರೆ ಈ ಉದ್ದೇಶ ಮರೆತು ನಾನು ಮೇಲಿನವನು ಎಂದು ಅಹಂಕಾರ ಪಟ್ಟು ಇತರರ ಗುಣಶೀಲವನ್ನು ಲೆಕ್ಕಿಸದೆ ಇದ್ದಾಗ ಆ ಉತ್ತಮರೆಂದುಕೊಳ್ಳುವವರನ್ನು ಎಚ್ಚರಿಸಲು ಸವಾಲು ಮಾಡಬೇಕಾಗುತ್ತದೆ. ಅದನ್ನೇ ಕನಕದಾಸರು ಮಾಡಿದ್ದಾರಷ್ಟೆ. ಆದರೆ ತಾವಾಗಿಯೆ ಸಮಾಜದಕಟ್ಟುಪಾಡನ್ನು ದಾಸರು ಉಲ್ಲಂಘಿಸಲಿಲ್ಲ."

ಅಖಿಲೇಶ — "ಅಂದರೆ ದಾಸರು ಹೊರಗಿಂದ ಹೊರಗೆ ಇದ್ದು ಬಿಟ್ಟರಾ ? ಉಡುಪಿಗೆ ಬರಬಾರದಿತ್ತು."

"ದಾಸರು ನಿರಭಿಮಾನಿಗಳು ಅವರು ಹೊರಗೆ ಇದ್ದುಬಿಟ್ಟರು – ಇನ್ನು ಬರಬಾರದಿತ್ತು ಎಂಬುದು ನಿನ್ನ ಅಭಿಪ್ರಾಯ ಅಲ್ಲವೆ ?

ದಾಸರುಗಳು ಬರೋದು ಹೋಗೋದು ಎಲ್ಲಾ ಆ ಪರಮಾತ್ಮನ ಪ್ರೇರಣೆಯಂತೆ. ಆದ್ದರಿಂದ ಈಗ ನಾನು ನೀನು ಕುಳಿತು ಹೀಗಾಗಬಾರದ್ದಿತ್ತು ಹಾಗಾಗಬೇಕಿತ್ತು. ಅಂದದ್ದರಿಂದ ಏನು ಪ್ರಯೋಜನವಿದೆ ?"

ಕುಸುಮ — "ಬಿಡಿ ದಾಸರೆ ಅಲ್ಲಿಗೆ – ಉಡುಪಿಗೆ ಕನಕದಾಸರು ಹೋಗಿದ್ದರು; ಅಲ್ಲಿ ನಡೆದುದನ್ನು ಹೇಳಿ ಅಖಿಲೇಶನ ತಲಹರಟೆ ಇದ್ದದ್ದೇ."

ದಾಸರು — "ಏಕಮ್ಮ ತಲೆಹರಟೆ ಅನ್ನೋದು ! ಹಾಗೆಲ್ಲ ಅನ್ನಬಾರದು. ಅವರವರ ಅಭಿಪ್ರಾಯ ಅವರವರಿಗೆ. ಹೇಳುವುದು ಕೇಳುವುದು ಮಾನವನ ಸ್ವಭಾವ. ಹೇಳಲಿ ಬಿಡು. ನಿನ್ನ ಕುತೂಹಲವೂ ಸಹಜ. ಉಡುಪಿ ಕೃಷ್ಣನಿಗೆ ಅನ್ನ ಬ್ರಹ್ಮ ಅಂತಾರೆ ಗೊತ್ತಾ ?"

ಹುಡುಗರು "ಗೊತ್ತು. ಅಲ್ಲಿ ಯಾವಾಗಲೂ ಊಟ ಹಾಕುತ್ತಲೇ ಇರುತ್ತಾರೆ."

ದಾಸರು — ಅಲ್ಲಿ ಎಂಟುಸಲ ದಿನವೂ ಪೂಜೆ ಆಗುತ್ತೆ. ಪ್ರತಿ ಪೂಜೆಯಲ್ಲಿ ದೇವರಿಗೆ ನೈವೇದ್ಯ ಮಾಡುತ್ತಾರೆ. ಹಾಗೆ ನೈವೇದ್ಯವಾದ ಅಡುಗೆಯನ್ನು ಯಾತ್ರಾರ್ಥಿಗಳಿಗೆ - ಹಸಿದವರಿಗೆ ಬಡಿಸುತ್ತಿರುತ್ತಾರೆ. ಅಂಥ ಕ್ಷೇತ್ರದಲ್ಲಿ ಕನಕದಾಸರು ಉಪವಾಸ ಇರಬೇಕಾಗಿ ಬಂತು."

ಅಖಿಲೇಶ — "ಏಕೆ ? ಊಟಕ್ಕೆ ಹೋದಾಗಲು - 'ಕುರುಬ ಎದ್ದು ಹೋಗು' ಎಂದು ಡೊಳ್ಳು ಹೊಟ್ಟೆ ಬ್ರಾಹ್ಮಣರು ಅಟ್ಟಿಬಿಟ್ಟರೆ ?"

ದಾಸರು — "ಅಖಿಲೇಶ, ಮಾತನಾಡುವಾಗ ಹಾಗೆಲ್ಲ ಉಚಾಯಿಸಿ ಮಾತನಾಡಬಾರದು. ಡೊಳ್ಳು ಹೊಟ್ಟೆ, ಬ್ರಾಹ್ಮಣರಿಗೆ ಮಾತ್ರ ಇದೆ ಯೇನು ? ಅದು ಅವರ ಲಕ್ಷಣ ಎಂದು ತಿಳಿದ್ದಿದ್ದೀಯು ?"

ಹುಡುಗರೆಲ್ಲರು ಗೊಳ್ಳನೆ ನಕ್ಕರು.

ದಾಸರು — "ಕನಕದಾಸರೇ ಊಟಕ್ಕೆ ಹೋಗಲಿಲ್ಲ–ಅವರು 'ಕಾಡಿದರೆ ನಿನ್ನ ಕಾಡುವೆ ಬೇಡಿದರೆ ನಿನ್ನ ಬೇಡುವೆ' ಎಂದು ಸದಾ ಪರಮಾತ್ಮನನ್ನು ನಂಬಿದ್ದವರು."

ಸುಶೀಲ — "ಮತ್ತೆ ಊಟಕ್ಕೆ ಏನು ಮಾಡಿದರು ?"

ದಾಸರು — "ಏನು ಇಲ್ಲ. ಸುಮ್ಮನೆ ಒಂದೆರಡು ದಿನ ಇದ್ದರು. ಹಸಿವೆ ತಾಳಲಾರದಷ್ಟು ಮೀರಿದಾಗ - 'ತಲ್ಲಣಿಸದಿರು ಕಂಡ್ಯ ತಾಳು ಮನವೇ' ಎಂದು ಸಮಾಧಾನ ತಂದುಕೊಳ್ಳಲು ಯತ್ನಿಸಿದರು. ಅದೂ ಮೀರಿದಾಗ 'ತೊರೆದು ಜೀವಿಸಬಹುದೆ ಹರಿ ನಿನ್ನ ಚರಣ' ಎಂದು ಹಲುಬಿದರು. ಕೊನೆಗು ಶ್ರೀ ಕೃಷ್ಣ ಅವರ ಮೊರೆಯನ್ನು ಲಾಲಿಸಿ ಬಂದ. ಬಂಗಾರದ ಕಂಠಿಹಾರವನ್ನು ಕನಕದಾಸರಿಗೆ ತಂದು ಕೊಟ್ಟ. ಅದನ್ನು

ಅವರು ವೈಕುಂಠ ಶಾನುಭೋಗ ಎಂಬುವರಲ್ಲಿ ಅಡವಿಟ್ಟು ಹಣ ತಂದ ಹೊಟ್ಟೆ ತುಂಬಿಸಿಕೊಳ್ಳಲು ಪ್ರಾರಂಭಿಸಿದರು..."

ಶ್ರೀಪತಿ — "ಅಂದರೆ ಪತ್ತೆ ಆದಾಗ ಮತ್ತೆ ತಿರುಪತಿ ಸೇವೆ ದಾಸರಿಗಾಯಿತು" ರಾಗವಾಗಿ ಹೇಳಿದ.

ದಾಸರು — "ನಿನ್ನ ಊಹೆ ಸರಿಯಲ್ಲ, ಪತ್ತೆ ಆಯಿತು ನಿಜ. ಆದರೆ ಇಲ್ಲಿ ಅವರನ್ನು ಕಂಬಕ್ಕೆ ಕಟ್ಟಿ ಮಹಂತ ಹೊಡೆಸಿದಂತೆ ಹೊಡಿಸಲಿಲ್ಲ.

ಹುಡುಗರು — "ಮತ್ತೆ ?"

ಕುಸುಮ — "ಪತ್ತೆ ಆದದ್ದು ಹೇಗೆ ?"

ದಾಸರು — "ಕನಕದಾಸರು ಉಡುಪಿಗೆ ಬಂದ ಸಮಾಚಾರ ಸೋದೆಯಲ್ಲಿದ್ದ ವಾದಿರಾಜರಿಗೆ ತಿಳಿಯಿತು. ಅವರು ಉಡುಪಿಗೆ ಧಾವಿಸಿ ಬಂದರು. ಅವರಿಗೆ ಕನಕದಾಸರ ಮಹಿಮೆ ಗೊತ್ತಿತ್ತು. ಅವರು ಬಂದು ದ್ವಾದಶಿ ದಿವಸ ಮಾಮೂಲಿನಂತೆ ದೇವರ ಆಭರಣಗಳ ಲೆಕ್ಕಮಾಡುತ್ತಿದ್ದರು. ಬೀಗಮುದ್ರೆ ಹಾಕಿಟ್ಟಿದ್ದ ಸಂದೂಕ ಸರಿಯಾಗಿತ್ತು. ಆದರೆ ಅದರಲ್ಲಿರುವ ಕಂಠಿಹಾರ ಇರಲಿಲ್ಲ. ಈ ಸಮಾಚಾರ ಗೊಂದಲಕಿಟ್ಟುಕೊಂಡಿತು. ಆಗ ಕನಕದಾಸರು ಅದನ್ನು ಶ್ರೀ ಕೃಷ್ಣ ತಮಗೆ ಕೊಟ್ಟನೆಂದೂ ಅದನ್ನು ಅಡವಿಟ್ಟು ಹಣ ಪಡೆದುದಾಗಿಯೂ ತಿಳಿಸಿದರು. ವೈಕುಂಠ ಶಾನುಭೋಗರಿಂದ ಆ ಮಾತಿನ ಸಮರ್ಥನೆ ಆಯಿತು. ವಾದಿರಾಜರು ಕನಕದಾಸರನ್ನು ಗೌರವದಿಂದ ನೋಡಿಕೊಳ್ಳುತ್ತಿದ್ದರು. ಹಂಪೆಯಲ್ಲಿ ದಾಸರೊಂದಿಗೆ ಕುಣಿಯುತ್ತಿದ್ದಂತೆ ಇಲ್ಲಿಯೂ ಆಶುಕವಿತೆ ಕಟ್ಟಿ ಹಾಡುವುದು, ಕುಣಿಯುವುದು ಪ್ರಾರಂಭವಾಯಿತು. ಕನಕದಾಸರ ಕೀರ್ತಿ ಎಲ್ಲೆಲ್ಲೂ ಹರಡಿತು. ಕನಕದಾಸರಿಗೆ ಇದು ಬೇಕಿರಲಿಲ್ಲ. ಅಂತೆಯೇ ಒಮ್ಮೆ ಅಲ್ಲಿಂದ ಹೊರಟುಬಿಟ್ಟರು."

ಅನಿಲೇಶ ! "ಎಲ್ಲಿಗೆ ಹೋದರು ?"

ದಾಸರು — "ಎಲ್ಲಿಗೆ ಅಂತ ಹೇಳೋಣ ! ಅಂತು ಎಲ್ಲಾ ವೈಷ್ಣವ ಕ್ಷೇತ್ರಗಳನ್ನು ನೋಡಿದರು. ಅಲ್ಲಲ್ಲಿಯ ದೇವತಾಸ್ತೋತ್ರದಿಂದ ಗೊತ್ತಾಗುತ್ತದೆ. ಮೇಲುಕೋಟೆ, ಬೇಲೂರು, ಮಾಳೂರು, ಶ್ರೀರಂಗಪಟ್ಟಣ ಮುಂತಾದ ಕ್ಷೇತ್ರಗಳಲ್ಲಿ ಸಂಚರಿಸಿದರು".

ಶ್ರೀಪತಿ — "ಬೇಲೂರಿನಲ್ಲಿ ಬಹಳ ದಿನ ಇದ್ದರಂತೆ"

ದಾಸರು — "ಹೌದಪ್ಪ, ಹಾಗೆನ್ನುತ್ತಾರೆ !"

ಅಖಿಲೇಶ — "ಅಲ್ಲೂ ಏನೋ ನಡೆದಿರಬೇಕು."

ದಾಸರು — "ಅಂದರೆ ಪವಾಡವೆ ? ಇಲ್ಲಪ್ಪ ದಾಸರು ತಾವಾಗಿ ಯಾವ ಪವಾಡವನ್ನು ತೋರಿಸಲೂ ಹಾತೊರೆಯುವುದಿಲ್ಲ. ತನ್ನ ಕೀರ್ತಿಯನ್ನು ಹಾಡಿ ಪಾಡಿ ನಲಿಯುವ ದಾಸರ ಕೀರ್ತಿಯನ್ನು ಬೆಳಗಿಸಲು ಶ್ರೀಹರಿ ಒಮ್ಮೊಮ್ಮೆ ಲೋಕೋತ್ತರ ಲೀಲೆಯನ್ನು ಮಾಡಿ, ಜನರ ಗಮನವನ್ನು ತನ್ನ ಭಕ್ತರ ಕಡೆ ಸೆಳೆಯುತ್ತಾನೆ. ದಾಸರಾದವರು ಮಾನಾಭಿಮಾನ ಬಿಟ್ಟವರು. ತಮ್ಮನ್ನು ದಾಸರ ದಾಸನಾಗಿಸಲು ಶ್ರೀಹರಿಯನ್ನು ಬೇಡುವವರೂ ಆಗಿರುತ್ತಾರೆ."

ಕುಸುಮ — "ಅಲ್ಲಿ ವೈಕುಂಠ ದಾಸರ ಮನೆ ಊಳಿಗ ಮಾಡಿಕೊಂಡಿದ್ದರಂತೆ ಅದನ್ನು

"ಬಂಟನಾಗಿ ಬಾಗಿಲಕಾಯ್ವ ಹರಿಯೆ

ವೈಕುಂಠ ಸೊಂಪಿನ ದಾಸರ ಮನೆಯು" – ಎಂಬ ದೇವರ ನಾಮದಲ್ಲಿ ಹೇಳಿದ್ದಾರೆ.

ದಾಸರು — "ಜಾಣೆ, ನಿನಗೆ ಆ ದೇವರ ನಾಮ ಬರುತ್ತಲ್ಲ. ಹೇಳು ಪೂರ್ತಿಯಾಗಿ."

ಕುಸುಮ ಕೇದಾರಗೌಳ ರಾಗದಲ್ಲಿ ಆ ದೇವರ ನಾಮವನ್ನು ಹಾಡಿದಳು. ಎಲ್ಲರು ತಲ್ಲೀನರಾಗಿ ಕೇಳಿದರು.

"ಮೀಸಲ ಊಳಿಗ ನಾ ಮಾಡಿಕೊಂಡಿರುವೆ. ಶೇಷಪ್ರಸಾದವ ಉಂಡುಕೊಂಡಿರುವೆ. ಶೇಷಾಚಲ ಕಾಗಿನೆಲೆಯಾದಿ ಕೇಶವನೆ! ದಾಸರ ದಾಸರ ದಾಸರ ಮನೆಯು" ಎಂದು ಹೇಳಿ ಮುಗಿಸಿದಾಗ ದಾಸರು ತಮ್ಮ ಮಾತನ್ನು ಮುಂದುವರಿಸಿದರು.

"ಚೆನ್ನಾಗಿ ಹೇಳುತ್ತೀಯಮ್ಮ. ದೇವರು ನಿನಗೆ ಒಳ್ಳೆಯದು ಮಾಡಲಿ."

ಹುಡುಗರು — "ಆಮೇಲೆ ಏನಾಯ್ತು ದಾಸರೆ ?"

ದಾಸರು — "ಕಾಗಿನೆಲೆಯಾದಿ ಕೇಶವನ ಎಂಬ ಮಾತು ಕಿವಿಯ ಮೇಲೆ ಬಿದ್ದಾಕ್ಷಣ ವೈಕುಂಠ ದಾಸರು ಮನೆಯಿಂದ ಹೊರಗೆ ಬಂದರು. ಕನಕದಾಸರ ಮಹಿಮೆಯನ್ನು ಕೇಳಬಲ್ಲರು. ಆದ್ದರಿಂದ ಬಂದದ್ದೇ ಅವರನ್ನು ಬಿಗಿದು ಆಲಂಗಿಸಿಕೊಂಡರು. ಒಳಗೆ ಕರೆತಂದು ಕೂಡಿಸಿಕೊಂಡು 'ಕನಕ ಮೋಸಹೋದೆ. ಅಪರಂಜಿ ಎಂದು ಅರಿಯದೆ ಅಪರಾಧ ಮಾಡಿದೆ. ನಿಮ್ಮಂಥ ಭಕ್ತರಿಂದ ಊಳಿಗ ಮಾಡಿಸಿಬಿಟ್ಟೆ! ಶ್ರೀಹರಿ ಇದಕ್ಕೇನು ಪ್ರಾಯಶ್ಚಿತ್ತ !!' ಎಂದು ಹಲುಬಿದರು.

"ಅದಕ್ಕೆ ಕನಕದಾಸರು ಸಮಾಧಾನ ಹೇಳುತ್ತಾ 'ನಮ್ಮ ಸ್ವಾಮಿ 'ಹೂವ ತರುವರ ಮನೆಗೆ ಹುಲ್ಲು ತರುವ', ಅವಗಿಲ್ಲದ ಗರ್ವ ನಮಗೆಲ್ಲಿಂದ ಬಂದೀತು ? ನಾನೇನು ಅವನಂತೆ ಬಂಡಿ ಬೋವಳನಾಗಿ ದುಡಿದೆನೇ ?

ಬಾಗಿಲಲ್ಲಿ ನಿಂತು ನಿಮ್ಮ ಮನೆಗೆ ಬಂದು ಹೋಗುವ ಸಜ್ಜನರ ಪರಿಚಯ ಮಾಡಿಕೊಂಡೆ. ತಾವು ಹರಿಯ ಉತ್ಸವದಲ್ಲಿ ಭಾಗವಹಿಸಲು ಹೋದಾಗ ಈ ಕುರುಬ ತಮ್ಮ ಮನೆಯ ಭೃತ್ಯನಾದ್ದರಿಂದಲೇ ಲಾಠಿ ಹಿಡಿದು ತಮಗಿಂತ ಮುಂದೆ ಸಾಗಿ ಚಲುವರಾಯನನ್ನು ನೋಡುತ್ತಿದ್ದ...ತಪ್ಪು ಎಲ್ಲಾಯಿತು ? ಯಾರಿಂದ ? ಶ್ರೀಹರಿಯ ಸೇವೆ ಎಲ್ಲಿದ್ದರೂ ಸಿಗುತ್ತದೆ. ನಿಮ್ಮಂಥ ಹರಿದಾಸರ ಸೇವೆ ಶ್ರೀಹರಿಯ ಕರುಣೆಯಿಂದ ಮಾತ್ರ ಸಿಗುತ್ತದೆ.'

"ವೈಕುಂಠ ದಾಸರು — 'ಶ್ರೀ ಹರಿಯ ಕರುಣೆ ನಿಮ್ಮ ಮೇಲಿರುವಷ್ಟು ಮತ್ತೆ ಯಾರ ಮೇಲೆ ಇದೆ ಹೇಳಿ ? ನಾವು ಕೇಳಿದ್ದೇವೆ. ಶ್ರೀಹರಿಯೇ ನಿಮ್ಮ ಮಾತಿಗೆ ಕಟ್ಟುಬಿದ್ದಿರುವನಂತೆ ಶ್ರೀಹರಿಯ ಒಲುಮೆಗಾಗಿ ನಾವು ಹಂಬಲಿಸುತ್ತಿದ್ದೇವೆ. ಹರಿಯೇ ಹಂಬಲಿಸಿ ನಿಮ್ಮನ್ನು ದಾಸರನ್ನಾಗಿ ಮಾಡಿಕೊಂಡಿದ್ದಾನೆ.'

"ಹೀಗೆಂದು ಒಬ್ಬರನ್ನೊಬ್ಬರು ಆದರಿಸಿದರು. ಗೌರವಿಸಿದರು. ಸಾಧು ಸಜ್ಜನರ ಸಮಾಗಮ ಎಂದರೆ ಹಾಲು–ಜೇನು ಬೆರಸಿ ಕುಡಿದಂತೆ. ತಮ್ಮ ಪ್ರಸಿದ್ಧಿಗೆ ಹೆದರಿ ಓಡುತ್ತಿದ್ದರು ಕನಕದಾಸರು. ವೈಕುಂಠ ದಾಸರಿಂದ ಬೀಳ್ಕೊಂಡು ಹೊರಟೇಬಿಟ್ಟರು. ವಾದ್ಯ ವೈಭವಗಳೊಡನೆ ವೈಕುಂಠದಾಸರು ಯಗಚೀ ನದಿಯವರೆಗೂ ಬಂದು ಕನಕದಾಸರನ್ನು ಬೀಳ್ಕೊಟ್ಟರು. ಅಂತೂ ಕನಕದಾಸರು ಆಗ ಪ್ರಸಿದ್ಧರಾದ ವೈಷ್ಣವರನ್ನೆಲ್ಲಾ ಕಂಡು ಪರಿಚಯ ಮಾಡಿಕೊಂಡಿದ್ದರು. ಅವರಿಗೆ ಎಲ್ಲರಲ್ಲೂ ಸಮಾನವಾದ ಗೌರವಾದರಗಳಿದ್ದವು."

"ಕನಕದಾಸರು ಅಲ್ಲಿರುವಾಗ ಬರಿ ಊಳಿಗ ಮಾಡಿದರೊ ಅಥವಾ ಏನಾದರೊ ಬರೆದರೊ ?" — ಅಖಿಲೇಶ ಪ್ರಶ್ನಿಸಿದ.

"ಬರೆದಿರಲೇ ಬೇಕು. ದೇವರನಾಮಗಳಲ್ಲಿ 'ವರಪುರದ ಚೆನ್ನಿಗರಾಯ' ಎಂಬ ಅಂಕಿತದಲ್ಲಿ ಬರೆದವುಗಳು ಪ್ರಾಯಶಃ ಬೇಲೂರಿನಲ್ಲಿ ರಚಿಸಿ ಹಾಡಿದ್ದಿರ ಬೇಕಲ್ಲವೆ ?" ಎದ್ದು ನಿಂತು ಶ್ರೀಪತಿ ಹೇಳಿದ.

ದಾಸರು —"ಹೌದಪ್ಪ. ಅಲ್ಲಿರುವಾಗ ಅನೇಕ ದೇವರನಾಮಗಳನ್ನು ಹಾಡಿರಬೇಕು. ಅಲ್ಲಿರುವಾಗಲೇ ಹರಿಭಕ್ತಿಸಾರವನ್ನು ರಚಿಸಿರುವರು. ಅದರ ಅಂಕಿತ 'ಸುರಪುರ ನಿಲಯ ಚೆನ್ನಿಗರಾಯ' ಎಂದಿದೆ. ನೋಡಪ್ಪ ದಾಸರು ಎಲ್ಲಿ, ಎಂದು ಯಾವ ಕೃತಿಯನ್ನು ರಚಿಸಿ ಹಾಡಿದ್ದಾರೆಂದು ಹೇಳಲು ಏನೊಂದು ಆಧಾರವಿಲ್ಲ. ಕನಕದಾಸರ ಅಂಕಿತ ಕಾಗಿನೆಲೆಯಾದಿ ಕೇಶವ ಎಂದು. ಕಾಗಿನೆಲೆಯಾದಿ ಕೇಶವ ದಾಸರ ಉಪಾಸ್ಯ. ಆದರೆ ಈ ಅಂಕಿತ ನರಸಿಂಹಸ್ತವ ಮತ್ತು ಮೋಹನ ತರಂಗಿಣಿಯಲ್ಲಿ ಮಾತ್ರ ಇದೆ. ಆದಿಕೇಶವರಾಯನ ಸ್ತುತಿಯೂ ಇದೆ. ಸುರಪುರ ಅಥವಾ ವರಪುರ ಚೆನ್ನಿಗರಾಯನ ಸ್ತುತಿ ಹರಿಭಕ್ತಿಸಾರ, ನಳಚರಿತ್ರೆ ಮತ್ತು ರಾಮಧಾನ್ಯ ಚರಿತ್ರೆಯಲ್ಲಿವೆ. ಸುರುಪುರ ಅಥವಾ ವರಪುರ ಎಂಬುದನ್ನು ಬೇಲೂರು ಎಂದು ಭಾವಿಸಿ ಈ ಕೃತಿಗಳನ್ನು ಅಲ್ಲಿರುವಾಗ ರಚಿಸಿದ್ದೆಂದು ಹೇಳು ವುದು ವಾಡಿಕೆ. ಕನಕದಾಸರು ಸ್ತುತಿಸಿರುವುದು ತಮ್ಮ ಉಪಾಸ್ಯ ದೇವ ನಾದ ಕಾಗಿನೆಲೆಯ ಬಳಿ ಇರುವ ಇಂಗಳಗುಂದಿಯ ಚೆನ್ನಕೇಶವನಿರಬೇಕು ; ಬೆಲೂರು ಚೆನ್ನಕೇಶವನಾಗಿರಲಾರನೆಂದು ತರ್ಕಿಸುವವರಿದ್ದಾರೆ. ಈ ವಿಷಯದಲ್ಲಿ ಇನ್ನೂ ಸತ್ಯಶೋಧನೆ ಆಗಬೇಕಾಗಿದೆ. ಅದು ವಿದ್ವಾಂಸ ರಿಗೆ ಸಂಬಂದಪಟ್ಟ ವಿಷಯ. ನಮಗೇನಪ್ಪ ಶೈಲಿಸಾಮ್ಯದಿಂದ ಮತ್ತು ಜನರಲ್ಲಿರುವ ನಂಬಿಕೆಯ ಆಧಾರದ ಮೇಲೆ ಯಾವಯಾವ ಗ್ರಂಥಗಳನ್ನು ಕನಕದಾಸರವು ಎಂದು ಹೇಳುತ್ತಾರೋ ಅವೆಲ್ಲ ಕನಕದಾಸರ ಕೃತಿಗಳು ಎನ್ನುತ್ತೇವೆ. ನಮಗಷ್ಟು ಸಾಕು ಅಲ್ಲವೆ ?"

ಅಖಿಲೇಶ — "ಹರಿಭಕ್ತಿಸಾರದ ಕತೆಯೇನು ?

ದಾಸರು —"ಹರಿಭಕ್ತಿಸಾರದಲ್ಲಿ ಕತೆಯೇ ಇಲ್ಲಪ್ಪ. ಅದರಲ್ಲಿ ದೇವರ ಹಾಗೂ ಜೀವರ ಸಂಬಂಧವನ್ನು ಸುಲಭವಾಗಿ ವರ್ಣಿಸಿದ್ದಾರೆ."

"ದೀನ ನಾನು ಸಮಸ್ತ ಲೋಕಕೆ ದಾನಿ ನೀನು ವಿಚಾರಿಸಲು ಮತಿ ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು ! ಏನು ಬಲ್ಲೆನೊ ನಾನು ನೆರೆ ಸುಜ್ಞಾನ ಮೂರುತಿ ನೀನು ನಿನ್ನ ಸಮಾನರುಂಟೇ ದೇವ ರಕ್ಷಿಸು ನಮ್ಮ ನನವರತ" — ಎಂದು ನಿಂತು ಅರ್ಕೇಶ ಬಡಬಡನೆ ಹೇಳಿದ.

ದಾಸರು —"ಅರ್ಕೇಶ ! ಸಮಯಕ್ಕೆ ಸರಿಯಾದ ಪದ್ಯವನ್ನು ಹೇಳಿದೆ. ಆದರೆ ಹೀಗೆ ಗಡಿಬಿಡಿಯಲ್ಲಿ ಹೇಳಬಾರದು. ಪದ್ಯವನ್ನು ಅರ್ಥವಾಗುವಂತೆ ಭಾವಗರ್ಭಿತವಾಗಿ ಹಾಡುವುದು ಒಂದು ಕಲೆ. ಅದನ್ನು ಗಮಕಕಲೆ ಎನ್ನುತ್ತಾರೆ. ಚೆನ್ನಾಗಿ ಅಭ್ಯಾಸ ಮಾಡು. ನಿನಗೆ ಎಷ್ಟು ಪದ್ಯ ಬಾಯಿಗೆ ಬರುತ್ತದೆ ?"

ಅಶ್ವತ್ಥ —"ರಕ್ಷಿಸು ನಮ್ಮ ನನವರತ ಎಂದು ಬರುವ ಪದ್ಯಗಳೆಲ್ಲವೂ ಹರಿಭಕ್ತಸಾರದ್ದು ಅಲ್ಲವೆ ದಾಸರೆ ?"

ದಾಸರು — "ಹೌದಪ್ಪ ಅಶ್ವತ್ಥ ! ಇಂಥ ಒಂದೂನೂರ ಹತ್ತು ಪದ್ಯಗಳನ್ನು ಬರೆದಿದ್ದಾರೆ. ಗಹನವಾದ ತತ್ವಗಳನ್ನು ಸುಲಭವಾಗಿ ಹೇಳುವ ಜಾಣ್ಮೆ ಕನಕದಾಸರದು. ಇದನ್ನು ಅರ್ಥಮಾಡಿಕೊಳ್ಳಲು ರಾಮಾಯಣ, ಭಾರತ, ಭಾಗವತ ಮುಂತಾದ ಪುರಾಣಗಳ ಜ್ಞಾನ ಇರಬೇಕು."

"ಅದೇಕೆ ?" — ಅರ್ಕೇಶ ಕೇಳಿದ.

ಇನ್ನೂ ನಾಲ್ಕಾರು ಹುಡುಗರು ಎದ್ದು ನಿಂತರು. ಅರ್ಕೇಶನ ಪ್ರಶ್ನೆಯನ್ನು ಕೇಳಿ ಸುಮ್ಮನೆ ಕುಳಿತರು.

"ನೀವು ಇದೇ ಪ್ರಶ್ನೆ ಕೇಳಬೇಕೆಂದು ಎದ್ದದ್ದೊ? ಸರಿ. ಏಕೈ ಓದಿರಬೇಕು ಅಂದರೆ ಅನೇಕ ಕಡೆ ಆ ಪುರಾಣಗಳಲ್ಲಿ ಬರುವ ಹೆಸರ ಗಳನ್ನೂ, ಕಥೆಗಳನ್ನೂ ಸೂಚಿಸುತ್ತಾರೆ. ಅದಕ್ಕೆ" – ದಾಸರು ಉತ್ತರಿಸಿದರು.

ಶ್ರೀಪತಿ — "ಅದರಲ್ಲಿ ಏನು ವಿಷಯ ಹೇಳಿದ್ದಾರೆ ?"

ದಾಸರು — "ಆದರಲ್ಲಿ ಅಂದರೆ ಹರಿಭಕ್ತಿಸಾರದಲ್ಲಿ ಅಲ್ಲವೇ ? ಹರಿಭಕ್ತಿ ಸಾರದಲ್ಲಿ ಕನಕದಾಸರು ಮುಖ್ಯವಾಗಿ ಹೇಳುತ್ತಿರುವುದು ಸರ್ವವೂ ಪರಮಾತ್ಮನ ಅಧೀನ. ಜೀವ ಪರಮಾತ್ಮನಲ್ಲಿ ಭಕ್ತಿ ಮಾಡಬೇಕು. ಭಕ್ತಿಯಿಂದಲೇ ಮುಕ್ತಿ. ಭಕ್ತಿಗಾಗಿ ಜ್ಞಾನ ಬೇಕು. ವೈರಾಗ್ಯ ಬೇಕು. ಒಟ್ಟಿನಲ್ಲಿ ಭಕ್ತಿರಸ ಒಂದೊಂದು ಪದ್ಯದಲ್ಲೂ ತುಂಬಿ ತುಳುಕುತ್ತಿದೆ."

ಹರಿಪ್ರಿಯ ಎದ್ದು ನಿಂತದ್ದನ್ನು ಕಂಡು ದಾಸರು "ಏನಮ್ಮ? ಏಕೆ ನಿಂತಿದ್ದೀಯೆ ?" ಎಂದು ಕೇಳಿದರು.

ಹರಿಪ್ರಿಯಾ — "ಹರಿಭಕ್ತಿಸಾರವನ್ನು ಪ್ರತಿದಿನ ಪಾರಾಯಣ ಮಾಡುತ್ತಾರಲ್ಲ ಕಾರಣವೇನು ?"

ದಾಸರು — "ಇದೊಂದು ಬಿನ್ನಪಕಾವ್ಯ. ಅಂದರೆ ಜೀವ ತನ್ನ ಬಿನ್ನಪವನ್ನು ಪರಮಾತ್ಮನಿಗೆ ಹೇಳಿಕೊಳ್ಳುತ್ತಾನೆ. ರಕ್ಷಿಸು ನಮ್ಮ–ನನವರತ ಎಂದು ಪ್ರಾರ್ಥಿಸಿಕೊಳ್ಳುತ್ತಾನೆ. ನಾವು ಪರಮಾತ್ಮನ ರಕ್ಷೆಯನ್ನು ಬೇಡುತ್ತೇವೆ. ಹೇಗೆ ಬೇಡಿಕೊಳ್ಳಬೇಕೆಂಬುದನ್ನು ಕನಕದಾಸರು ತೋರಿಸಿಕೊಟ್ಟಿದ್ದಾರೆ. ನಮ್ಮ ಅನುಭವಕ್ಕೆ, ಹಂಬಲಕ್ಕೆ ದಾಸರೇ ಮಾತು ಕೊಡಿಸಿದ್ದಾರೆಂದು ತೋರುತ್ತದೆ. ಅದಕ್ಕೆ ಅದನ್ನು ಜನ ಪಾರಾಯಣ ಮಾಡುವರು."

"ಇದು ಭಾಮಿನೀಷಟ್ಪದಿ ಪದ್ಯ ಅಲ್ಲವೆ ದಾಸರೆ ? ಕುಮಾರವ್ಯಾಸನ ಭಾರತದ ಪದ್ಯಗಳಂತೆ ಇವೆ" — ಕುಸುಮ ಕೇಳಿದಳು.

"ನಳಚರಿತ್ರೆಯ ಪದ್ಯಗಳೂ ಹೀಗೇ ಇವೆ" — ಅರ್ಕೇಶ ಹೇಳಿದ.

"ಹೌದು. ಹರಿಭಕ್ತಿ ಸಾರ ಮತ್ತು ನಳಚರಿತ್ರೆ – ಇವೆರಡನ್ನೂ ದಾಸರು ಕುಮಾರವ್ಯಾಸನ ಭಾರತದ ಅನುಕರಣೆಯಲ್ಲಿ ಭಾಮಿನೀಷಟ್ಪದಿಯಲ್ಲಿ ಬರೆದಿದ್ದಾರೆ. ನಳಚರಿತ್ರೆ ಪ್ರೇಮಕಾವ್ಯ. ಹರಿಭಕ್ತಿಸಾರ – ಭಾವಪ್ರಧಾನವಾದ ಕಾವ್ಯ – ಶೃಂಗಾರ ಶತಕ, ನೀತಿ ಶತಕ ಮುಂತಾದುವುಗಳ ಶ್ರೇಣಿಯಲ್ಲಿ ಬರುವಂಥ 'ಭಕ್ತಿ ಶತಕ' ಎಂದು ಹೇಳಬಹುದು."

"ನಳಚರಿತ್ರೆಯಲ್ಲಿ ಭಕ್ತಿಯನ್ನು ಹೇಳಿದ್ದಾರೋ, ಬರೀ ಕಥೆಯನ್ನು ಹೇಳಿದ್ದಾರೋ" — ಕಾವೇರಿ ಪ್ರಶ್ನಿಸಿದಳು.

"ನೋಡಮ್ಮ ಕಾವೇರಿ, ದಾಸರು ಏನು ಹೇಳಿದರೂ ಅದರಲ್ಲಿ ಭಕ್ತಿಯ ಲೇಪ ಇದ್ದೇ ಇರುತ್ತೆ. ನಳಚರಿತ್ರೆ ಅತ್ಯಂತ ರೋಚಕವಾದ ಕಥೆ. ಮಹಾಭಾರತದಲ್ಲಿ ವ್ಯಾಸರು ವನಪರ್ವದಲ್ಲಿ ಈ ಕಥೆಯನ್ನು ಹೇಳಿದ್ದಾರೆ. ಆ ಕಥೆಯನ್ನು ಬಳಸಿಕೊಂಡು ಸಂಸ್ಕೃತದಲ್ಲಿ ಶ್ರೀಹರ್ಷ ಎಂಬುವನು ನೈಷಧ ಎಂಬ ಮಹಾಕಾವ್ಯವನ್ನು ಬರೆದಿದ್ದಾನೆ. ಕನಕದಾಸರು ಆ ಕಥೆಯಲ್ಲಿ ವಿಶೇಷ ಬದಲಾವಣೆ ಮಾಡದಿದ್ದರೂ ರಸಾಸ್ವಾದನೆಗೆ ಅನುಕೂಲವಾಗುವಂತೆ ಸಣ್ಣಪುಟ್ಟ ಬದಲಾವಣೆ ಮಾಡಿಕೊಂಡಿದ್ದಾರಂತೆ. ಕಥೆ ಎಲ್ಲಿಯೂ ನೀರಸವಾಗಿಲ್ಲ. ಸರಳ ಓಟ ಓದುಗರನ್ನು ಸೆರೆಹಿಡಿಯುತ್ತದೆ. ಈ ಕಥೆಯನ್ನು ಕುಮಾರವ್ಯಾಸ ತನ್ನ ಭಾರತದಲ್ಲಿ ಐದೇ ಪದ್ಯದಲ್ಲಿ ಮುಗಿಸಿದ್ದರೆ ಕನಕದಾಸರು ೪೮೦ ಪದ್ಯಗಳಷ್ಟು ವಿಸ್ತಾರವಾಗಿ ಹೇಳಿದ್ದಾರೆ. ನಳಚಕ್ರವರ್ತಿ ಮತ್ತು ದಮಯಂತಿಯರ ವಿವಾಹಕ್ಕೆ ಹಂಸ ಕಾರಣವಾಗುತ್ತದೆ. ಕಲಿಗೆ ಇವರ ದಾಂಪತ್ಯ ಸುಖ

ದಿಂದ ಅಸೂಯೆ. ಆದ್ದರಿಂದ, ಸತ್ಯಸಂಧನಾದ ನಳನನ್ನು ಪುಷ್ಕರನ ನೆರವಿನಿಂದ ಜೂಜಿನಲ್ಲಿ ಸೋಲಿಸಿ ಕಲಿ ಅವರನ್ನು ಕಾಡುಪಾಲು ಮಾಡುತ್ತಾನೆ. ವನದಲ್ಲಿ ಅನೇಕ ಕಷ್ಟಕೋಟಲೆಗಳನ್ನು ಅನುಭವಿಸಿದರೂ ಸತ್ಯವನ್ನು ಬಿಡದ ಕೋಮಲಚಿತ್ತನಾದ ನಳಮಹಾರಾಜ ದಮಯಂತಿಯನ್ನು ಕಷ್ಟದಿಂದ ಪಾರು ಮಾಡಲು ಗತ್ಯಂತರವಿಲ್ಲದೆ ಅಗಲಿ ಹೊರಟುಹೋಗುತ್ತಾನೆ. ಕಾರ್ಕೋಟಕನಿಗೆ ಸಹಾಯ ಮಾಡಲು ಹೋಗಿ ಕುರೂಪಿಯಾಗುತ್ತಾನೆ. ಕೊನೆಯಲ್ಲಿ ಆ ಕಾರ್ಕೋಟಕನ ಸಲಹೆಯಂತೆ ಋತುಪರ್ಣ ಮಹಾರಾಜನ ಸಾರಥಿಯಾಗಿ ಸೇರಿಕೊಳ್ಳುತ್ತಾನೆ. ಅಡಿಗೆಯವನೂ ಆಗಿರುತ್ತಾನೆ. ಇತ್ತ ದಮಯಂತಿ ಹೇಗೋ ತನ್ನ ತಂದೆ ಭೀಮನೃಪತಿಯ ಮನೆಗೆ ಬಂದು ಸೇರುತ್ತಾಳೆ. ದೈವಸಹಾಯದಿಂದ ನಳ–ದಮಯಂತಿಯರ ಪುನರ್ಮಿಲನವಾಗುತ್ತದೆ. ನಳನು ತನ್ನ ರೂಪವನ್ನೂ ರಾಜ್ಯವನ್ನೂ ಪಡೆಯುತ್ತಾನೆ. ಪುಷ್ಕರನನ್ನು ಜೂಜಿನಲ್ಲಿಯೇ ಸೋಲಿಸಲು ಋತುಪರ್ಣನಿಂದ ಕಲಿತ ಅಕ್ಷ ವಿದ್ಯೆ ಸಹಾಯವಾಗುತ್ತದೆ. ಆದರೆ ಮುಖ್ಯವಾಗಿ ದೈವ ಸಹಾಯ ಬೇಕು. ಹರಿಚಿತ್ತ ಸತ್ಯ. ದೈವವ ನೆನೆವ ಭಕ್ತರಿಗುಂಟೆ ಭಯ ಎಂಬುದನ್ನು ಸಾರುವುದೇ ಕನಕದಾಸರ ಗುರಿ. ಮುಕುಂದನ ಸ್ಮರಣೆ ತಾರಕ. ಅದು ಇಹಪರಗಳಲ್ಲಿ ಕಲ್ಯಾಣವನ್ನುಂಟುಮಾಡುವುದೆಂಬುದನ್ನು ಬಹು ಮನಮುಟ್ಟುವಂತೆ ತಿಳಿಸಿದ್ದಾರೆ. ಹಿತಮಿತವಾಗಿ ಬರುವ ವರ್ಣನೆಯಿಂದ ಈ ಕಾವ್ಯ ಹೃದವಾಗಿ ಬಂದಿದೆ. ಲೋಕಪ್ರಿಯತೆಗೆ ಕಾರಣವಾಗಿರುವುದು ಕನಕದಾಸರ ಸರಳ ಶೈಲಿ ಹಾಗು ರಸವತ್ತಾಗಿ ಕತೆ ಹೇಳುವ ಜಾಣ್ಮೆ."

"ಕನಕದಾಸರು ಇನ್ನು ಅನೇಕ ಕಥೆ ಹೇಳಿದ್ದಾರಲ್ಲವೆ ? ತಿರುಕನ ಕಥೆ ಒಂದಿದೆ ನಮಗೆ ಆ ಪದ್ಯ ಹೇಳಿದ್ದರು" – ಶ್ರೀಪತಿ ಎದ್ದು ನಿಂತು ಹೇಳಿದ.

"ಹೌದಪ್ಪ ನಿಮ್ಮ ಕರ್ನಾಟಕದ ಶಾಲೆಗಳಲ್ಲಿ ಆ ಕಥೆಯನ್ನು ಹೇಳಿರ ಬಹುದು. ಅದು ಚೆನ್ನಾಗಿದೆ."

'ತಿರುಕನೋರ್ವ ನೂರಮುಂದೆ ಮುರುಕು ಧರ್ಮಶಾಲೆಯಲ್ಲಿ
ಮಲಗಿರುತ್ತಲೊಂದು ಕನಸ ಕಂಡನಂತೆನೆ
ಪುರದರಾಜ ಸತ್ತನವಗೆ ವರಕುಮಾರರಿಲ್ಲದಿರಲು
ಕರಿಯ ಕೈಗೆ ಕುಸುಮಮಾಲೆ ಇತ್ತು ಪುರದೊಳು'

— ಶ್ರೀಪತಿ ಹೇಳಿ ಮುಗಿಸಿದ. ಅವನ ನಿರೂಪಣೆ ಸ್ವಾರಸ್ಯವಾಗಿತ್ತು. ಹುಡುಗರೆಲ್ಲರೂ ಮನಸ್ಸಿಟ್ಟು ಕೇಳಿದರು.

"ಈ ಕಥೆಯನ್ನು ದಾಸರು ಏಕೆ ಬರೆಯಬೇಕು ? ಇದರಲ್ಲಿ ಭಕ್ತಿ ಇಲ್ಲ, ಭಗವಂತನ ಮಹಿಮೆ ಇಲ್ಲ", ಎಂದು ವಿಜಯ ರಾಗ ಎಳೆದ.

"ಇದೇ ನೋಡಪ್ಪ ದಾಸರ ಮಾತಿನ ಮೋಡಿ ಎನ್ನುವುದು"—ದಾಸರು ಮುಂದುವರಿಸಿ ವಿಷಯವನ್ನು ಸ್ಪಷ್ಟಪಡಿಸುತ್ತಾ "ವಿಜಯ ! ಈ ತಿರುಕ ಬೇರೆ ಯಾರೂ ಅಲ್ಲಪ್ಪ ನಾನು, ನೀನು, ನಮ್ಮಂತೆ ಇರುವ ಎಲ್ಲ ಕಾಲದ ಎಲ್ಲ ಜನರೂ ತಿರುಕರೆ ! ಈ ದೇಹ ಮುರುಕು ಧರ್ಮಶಾಲೆ. ಪರಮಾತ್ಮ ನಮಗೆ ಕಟ್ಟಿಸಿರುವುದು. ಇದೇ ಪುರವೂ ಹೌದು, ಇಲ್ಲಿನ ನಿಜವಾದ ಒಡೆಯ ಪರಮಾತ್ಮ ಆತನನ್ನು ಮರೆತಿದ್ದೇವೆ. ಅಂದರೆ ಅವನು ನಮ್ಮ ಪಾಲಿಗೆ ಇಲ್ಲ, ಸತ್ತಂತೆ. ಇಂಥ ಮೋಹನಿದ್ರೆಯಲ್ಲಿ ಕನಸು ಕಾಣುತ್ತಿರುವ ನಮಗೆ ಅಜ್ಞಾನವೆಂಬ ಮದದಾನೆ, ಅಹಂಕಾರ, ಮಮಕಾರವೆಂಬ ಹಾರ ತೊಡಿಸಿ ಆ ಹಾಳೂರಿಗೆ ನಮ್ಮನ್ನು ದೊರೆಯಾಗಿ ಮಾಡಿ ನಾನಾ ಸುಖದುಃಖಗಳನ್ನು ಅನುಭವಿಸುವಂತೆ ಮಾಡುತ್ತದೆ. ಯಾವಾಗ ಅಸಹನೀಯ ದುಃಖ–ಮರಣ ಕಾಲ ಬರುತ್ತೆ, ಯಮಭಟರ ಧಾಳಿ ನಡೆಯುತ್ತೆ, ಆಗ ಎಚ್ಚರವಾಗುತ್ತೆ ;

ಕಟ್ಟಿರೆಯುತ್ತೇವೆ. ನಮ್ಮ ಅಸ್ವಾತಂತ್ರ್ಯ, ತಿರುಕುತನ ಗೊತ್ತಾಗುತ್ತೆ. ದಾಸರು ಏನು ಹೇಳಿದರೂ ಮೇಲು ನೋಟಕ್ಕೆ ಒಂದರ್ಥ ಇದ್ದರೆ, ಅದರ ತಾತ್ವಿಕಾರ್ಥ ಇನ್ನೊಂದಿರುತ್ತದೆ. ಆದರೆ, ನೋಡಪ್ಪ ಈ ಕಥೆಯನ್ನು ಕನಕದಾಸರು ಹೇಳಿದ್ದಲ್ಲ ಅನ್ನುತ್ತಾರಪ್ಪ, ಕೆಲವರು ವಿದ್ವಾಂಸರ ಪ್ರಕಾರ ಮುಪ್ಪಿನ ಷಡಕ್ಷರಿ ಎಂಬುವರು ಹೇಳಿದ್ದಂತೆ."

"ಇಂಥ ಎರಡೆರಡು ಅರ್ಥ ಬರುವಂತೆ ಹೇಳಿರುವ ಪದಗಳಿಗೆ, ಕೀರ್ತನೆಗಳಿಗೆ ಮುಂಡಿಗೆ ಎಂದು ಕರೆಯುತ್ತಾರಲ್ಲವೇ ?" ವಿಜಯ ಪ್ರಶ್ನಿಸಿದ.

"ಇಲ್ಲ ವಿಜಯ, ದಾಸರು ಕೆಲವು ನೇರವಾದ ಅರ್ಥಕೊಡುವ ಕೀರ್ತನಗಳನ್ನು ಬರೆದಿದ್ದಾರೆ. ಪುರಾಣಗಳ ಕತೆಯನ್ನು ಹೇಳಿದ್ದಾರೆ. ಗಜೇಂದ್ರ ಮೋಕ್ಷ, ದ್ರೌಪದೀ ಮಾನಸಂರಕ್ಷಣ ಮುಂತಾದ್ದನ್ನು ಉದಾಹರಿಸಬಹುದು. ಕೆಲವೊಮ್ಮೆ ಪುರಾಣಗಳ ಕತೆಯನ್ನು ತಮ್ಮದೇ ಆದ ಶೈಲಿಯಲ್ಲಿ ಸಂಗ್ರಹಿಸಿ ಎಲ್ಲವೂ ಕಪಟನಾಟಕ ಸೂತ್ರಧಾರಿಯ ಲೀಲೆ. ನಾವು ಅಸ್ವತಂತ್ರರು ಎಂಬುದನ್ನು ತಿಳಿಸಲು ಹಾಡಿದ್ದಾರೆ. 'ಗೊಂಬೆ ಆಟವನಾಡಿಸಿದೆ ಮಹಾಭಾರತದ', ಎಂಬುದನ್ನು ಉದಾಹರಿಸಬಹುದು. ಮುಂಡಿಗೆಗಳು ಅಂದರೆ ಒಗಟುಗಳು. ಅದನ್ನು ಹಿರಿಯರಿಂದ ಕೇಳಿ ಅರಿತಿದ್ದವರಿಗೆ ಮಾತ್ರ ಅರ್ಥಮಾಡಿಕೊಳ್ಳಲು ಬರುತ್ತದೆ, ಇಲ್ಲವಾದರೆ ಇಲ್ಲ. ವಿರೋಧಾಭಾಸಗಳು ಆ ಮುಂಡಿಗೆಗಳ ಜೀವಾಳ. 'ಕಾಲಿಲ್ಲದಾತನು ಹತ್ತಿದ ನಾಮರ', 'ಕೊರಳ ಕೌಯ್ಯುವ್ವದ ಕಂಡೆ ಕರುತನ ಕಾಣಲಿಲ್ಲ', 'ಕೆಂಪು ಮೂಗಿನ ಪಕ್ಷಿ ತಂಪಿನೊಳಿರುವುದು ನೆಂಪು ಬಲ್ಲವರು ಪೇಳಿ.' ಮುಂತಾದು ಮುಂಡಿಗೆಗಳು ಸ್ವಭಾವತಃ ಸುತ್ತು ಬಳಸಿದ ಶೈಲಿ ಕನಕದಾಸರಿಗೆ ಬಹು ಪ್ರಿಯ ಎಂದು ಕಾಣಿಸುತ್ತದೆ."

"ಕನಕದಾಸರು ಮೋಹನ ತರಂಗಿಣಿ ಬರೆದಿದ್ದಾರೆ ಅಂದರಲ್ಲ ಅದರ ಕಥೆ ಹೇಳಿ ದಯವಿಟ್ಟು."

"ದಯ ಏನು ಬಂತು ಸುಶೀಲ – ಪ್ರಶ್ನೆ ಹಾಗೆ ಕೇಳಬೇಕು ನಿಜ. ನಾವು ಇಲ್ಲಿ ಶ್ರೀನಿವಾಸನ ದಯೆಯಿಂದ ಸೇರಿರುವುದೇ ಹೇಳಲಿಕ್ಕೆ ಕೇಳಲಿಕ್ಕೆ. ಆದರೆ ಬಹಳ ಹೊತ್ತಾಯಿತು. ಮೋಹನ ತರಂಗಿಣಿಯೋ ಒಂದು ದೊಡ್ಡ ಕಾವ್ಯ. ವರ್ಣನೆಯೇ ಅದರಲ್ಲಿ ಮುಖ್ಯವಾದದ್ದು. ಒಂದು ಸಾವಿರದ ಎಂಟು ನೂರು ನುಡಿಗಳಿವೆ. ಸಾಂಗತ್ಯ ಎಂಬ ಛಂದಸ್ಸಿನಲ್ಲಿ ಸೊಗಸಾಗಿ ಹೇಳಿದ್ದಾರೆ. ಈ ಕಥೆ ಸ್ಕಂದ ಪುರಾಣ, ಮಹಾಭಾರತ, ಭಾಗವತ, ಹರಿವಂಶ ಇವುಗಳಲ್ಲಿ ಬಂದಿದೆ. ವಿವಿಧ ರೀತಿಯಲ್ಲಿ ಕಂಡುಬರುವ ಪುರಾಣದ ಮೂಲ ವಸ್ತುವನ್ನು ಕನಕದಾಸರು ತಮ್ಮ ಕಾವ್ಯಕ್ಕೆ ತಕ್ಕಂತೆ ಸರಿಹೊಂದಿಸಿಕೊಂಡು ಹೊಸ ರೂಪವನ್ನೇ ಕೊಟ್ಟಿದ್ದಾರೆ. ಇದರಲ್ಲಿ ಎರಡು ಬೇರೆ ಬೇರೆ ಶೃಂಗಾರದ ಕಥೆಗಳಿವೆ. ಒಂದು ಕಥೆ ಪ್ರದ್ಯುಮ್ನನದು. ಶಿವನ ಉರಿಗಣ್ಣಿನಿಂದ ಸುಟ್ಟು ಬೂದಿಯಾದರೂ ಕಾಮನು ಶಿವನ ವರದಿಂದ ಪ್ರದ್ಯುಮ್ನನಾಗಿ ಹುಟ್ಟಿ, ಬೆಳೆದು, ರತಿಯೊಡನೆ ಮರಳಿ ತನ್ನ ತಾಯಿತಂದೆಯವರಾದ ಶ್ರೀಕೃಷ್ಣ ರುಕ್ಮಿಣಿಯರನ್ನು ಹೊಂದುವುದು. ಇನ್ನೊಂದು, ಉಷಾ–ಅನಿರುದ್ಧರು, ಚಿತ್ರಲೇಖೆಯ ಸಹಾಯದಿಂದ ಗಾಂಧರ್ವ ವಿವಾಹವನ್ನು ಮಾಡಿಕೊಂಡಿರುವುದು ಉಷೆಯ ತಂದೆಯಾದ ಬಾಣಾಸುರನಿಗೆ ಗೊತ್ತಾದಾಗ ಅವನು ಅನಿರುದ್ಧನನ್ನು ಬಂಧಿಸಿದ್ದು ಮತ್ತು ಆ ಸಮಾಚಾರವನ್ನು ನಾರದರಿಂದ ತಿಳಿದು ಶ್ರೀ ಕೃಷ್ಣನು ತನ್ನ ಮಗ ಪ್ರದ್ಯುಮ್ನನ ಮಗನಿಗೆ ಬಂದಿರುವ ಕುತ್ತಿನಿಂದ ಅವರು ಪಾರುಮಾಡಲು ಸೇನಸಮೇತನಾಗಿ ಬಂದು ಧಾಳಿಮಾಡಿ ಬಾಣಾಸುರನನ್ನು ಸಂಹರಿಸಿ ಉಷಾ ಅನಿರುದ್ಧರನ್ನು ದ್ವಾರಕೆಗೆ ತರುವುದು. ಹೀಗೆ ಎರಡು ಮುಖ್ಯ ಕಥೆಗಳನ್ನು ಶ್ರೀಕೃಷ್ಣನನ್ನು ಸೂತ್ರಧಾರನನ್ನಾಗಿ

ಮಾಡಿ ಚಾಣಕ್ಯೆಯಿಂದ ಹೇಳಿ ಉತ್ತಮ ವರ್ಣಕ ಪರಂಪರೆಯ ಕಾವ್ಯ ರಚಿಸಿದಾ ರೆ ”

“ದಾಸರೆ ! ಅವರು ಇನ್ನೂ ಏನಾದರು ಬರೆದಿದ್ದರೆ ಹೆಸರನ್ನಾದರೂ ಹೇಳಿಬಿಡಿ” ಅರ್ಕೇಶ ಕೇಳಿದ.

“ನೋಡಪ್ಪ ಅರ್ಕೇಶ ನಿಮ್ಮ ಕುತೂಹಲ ತಿಳಿದುಕೊಳ್ಳಬೇಕೆಂಬ ಆಸೆ ಒಳ್ಳೆಯದು. ಈಗಾಗಲೆ ಹೊತ್ತಾಗಿದೆ. ಕನಕದಾಸರು “ನೃಸಿಂಹಸ್ತವ” ಎಂಬುದನ್ನು ಸಾಂಗತ್ಯದಲ್ಲಿ ಬರೆದಿದ್ದಾರಂತೆ. ಅವರ ಅಪೂರ್ವವಾದ ಇನ್ನೊಂದು ಕಾವ್ಯ “ರಾಮಧಾನ್ಯ ಚರಿತ್ರೆ”

“ದಾಸರೆ ! ಅಖಿಲೇಶನ ದನಿ ಕೇಳಿ ಎಲ್ಲರೂ ಆಕಡೆ ತಿರುಗಿದ್ದರು. ಕೈ ಮುಗಿದು ನಿಂತಿದ್ದ ಅವನು ದಯವಿಟ್ಟು ರಾಮಧ್ಯಾನ ಚರಿತೆಯ ಕಥೆ ಹೇಳಿ, ಅಪೂರ್ವವಾದದ್ದು ಅಂದಿರಲ್ಲ.”

“ಅಲೆ ತುಂಟ, ನನ್ನ ಮಾತನ್ನು ನನಗೆ ಮುಟ್ಟಿಸುತ್ತೀಯ ? ಇರಲಿ, ನೀನು ಹೇಳಿದ್ದನ್ನು ಸರಿಯಾಗಿ ಕಿವಿಗೊಟ್ಟು ಏಕೆ ಕೇಳಲಿಲ್ಲ. ನಾನು ರಾಮ ಧ್ಯಾನ ಚರಿತೆ ಎಂದು ಹೇಳಿದೆನೆ ?”

“ಇಲ್ಲ....ಇಲ್ಲ....” ನಾಲ್ಕಾರು ಧ್ವನಿಗಳು ಏಕಕಾಲದಲ್ಲಿ ಹೇಳಿದವು.

“ಹೌದು. ಹಾಗೆ ಹೇಳಲಿಲ್ಲ. ಏನು ಹೇಳಿದೆ ನೀನು ಹೇಳುವಿಯಾ, ಹರಿಪ್ರಿಯಾ ?”

ಹರಿಪ್ರಿಯ ಎದ್ದುನಿಂತು “ನನಗೇನೋ ರಾಮಧಾನ್ಯ ಚರಿತೆ ಅಂತ

ಕೇಳಿಸಿತು. ಅದು ಎಲ್ಲೊ ತಪ್ಪು ಇರಬೇಕು. ರಾಮಧ್ಯಾನ ಅಂದು ಕೊಂಡಿದ್ದೆ" ಎಂದು ಹೇಳಿದಳು.

"ಹೌದು, ಆ ಹೆಸರು ಹಾಗಿದೆ. ರಾಮಧ್ಯಾನ ಅನ್ನುವುದಾಗಿ ಅನೇಕರು ತಪ್ಪು ತಿಳಿದುಕೊಂಡಿದ್ದಾರೆ. ಅದರಲ್ಲಿ ರಾಮನ ಧ್ಯಾನ ಇದೆ. ಆದರೆ ಅದು 'ರಾಮಧಾನ್ಯ ಚರಿತೆ'.

"ರಾಮಧಾನ್ಯ ಅಂದರೆ ಯಾವುದು ?" — ಕೃಷ್ಣ ಕೇಳಿದ.

"ರಾಗಿಗೆ ರಾಮಧಾನ್ಯ ಎನ್ನುತ್ತಾರೆ. ಅದಕ್ಕೊಂದು ಕಥೆ ಹೆಣದಿದ್ದಾರೆ ಕನಕದಾಸರು. ಸಂಕ್ಷೇಪವಾಗಿಹೇಳುತ್ತೇನೆ ಕೇಳಿ. ಶ್ರೀರಾಮ ರಾವಣನನ್ನು ಸಂಹರಿಸಿದ ಮೇಲೆ ಋಷಿಮುನಿಗಳ ಆಶ್ರಮಕ್ಕೆ ಬಂದ. ಅಲ್ಲಿ ಅವನಿಗೆ ಒಳ್ಳೆ ಆತಿಥ್ಯ ನಡೆಯಿತು. ಭಕ್ಷ್ಯಗಳು ರುಚಿಸಿದವು. ಆ ಭಕ್ಷ್ಯಗಳಿಗೆ ಉಪಯೋಗಿಸಿದ ಧಾನ್ಯವನ್ನು ನೋಡುವ ಬಯಕೆ ರಾಮನಿಗಾಯಿತು. ಆಗ 'ನೆರೆದಗಲ' ಅಂದರೆ ರಾಗಿ ಮತ್ತು 'ವ್ರೀಹಿ' ಅಂದರೆ ಅಕ್ಕಿಯಲ್ಲಿ ನಾನು ಮೇಲು ನೀನು ಕೀಳು ಎಂಬ ದಾಟಿಯಲ್ಲಿ ವಾಗ್ವಾದ ನಡೆಯಿತು. ಶ್ರೀರಾಮ ಅವೆರಡನ್ನು ಆರು ತಿಂಗಳು ಸೆರೆಮನೆಯಲ್ಲಿಟ್ಟು ಬಿಟ್ಟ. ಅಯೋಧ್ಯೆಯಲ್ಲಿ ನ್ಯಾಯ ನಿರ್ಣಯ ಮಾಡಿ ವಿವಾದವನ್ನು ಪರಿಹರಿಸಲು ದೊಡ್ಡ ಸಭೆಯನ್ನು ಕರೆದ. ದೇವತೆಗಳು ಋಷಿಗಳು ಮುಂತಾದವರೆಲ್ಲ ಬಂದು ಸೇರಿದರು. ಆ ಸಭೆಯಲ್ಲಿ ಇಂದ್ರ ವಾದಿ ಪ್ರತಿವಾದಿಗಳಿಬ್ಬರ ವಿಚಾರವನ್ನು ಕೇಳಿ, ಸ್ವತಃ ಅವರ ಸತ್ವವನ್ನು ಪರೀಕ್ಷಿಸಿ ನೆರೆದಲಗನೇ ಸಾರಹೃದಯನೆಂದು ಸಾರಿದ. ಹನುಮಂತನ ಸಲಹೆಯಂತೆ ಆ ನೆರದಲಗನನ್ನು ಸತ್ಕರಿಸಿ 'ರಾಘವ' ಎಂಬ ತನ್ನ ಹೆಸರನ್ನೇ ಕೊಟ್ಟು ಪುರಸ್ಕರಿಸಿದ. ಅಂದಿನಿಂದ ಅದು ರಾಮಧಾನ್ಯವಾಯಿತು. ರಾಘವ ಎಂಬ ಪದ ಜನರ ಬಾಯಲ್ಲಿ ಉರುಳುರುಳಿ ಬರುವಾಗ

ರಾಗಿ ಆಯಿತು. ದೇವರು ಬಡವರ ಕೈವಾರಿ ಎಂಬುದನ್ನು ಬಹು ಸ್ವಾರಸ್ಯ ವಾಗಿ ತಿಳಿಸಿದ್ದಾರೆ ಈ ಕಾವ್ಯದಲ್ಲಿ. ಇದೊಂದು ಧ್ವನಿ ಪೂರ್ಣವಾದ ವಿಡಂಬನ ಕಾವ್ಯ. ಮುಂದಿನವಾರ ಮತ್ತೆ ಸೇರೋಣ. ನೀವು ಕನಕದಾಸರ ಕಾವ್ಯಗಳನ್ನೆ ಕುರಿತು ಬರೆದಿರುವ ಈ ಕಿರುಹೊತ್ತಿಗೆಯನ್ನು ಓದಿಕೊಂಡು ಬನ್ನಿ. ಈಗ್ಗೆ ಸಾಕು. ಹೊತ್ತಾಯಿತು. ಈಗ ಎಲ್ಲರೂ ಅರ್ಧಕ್ಕೆ ಬಿಟ್ಟಿದ್ದೆವಲ್ಲ ಆ ಭಜನೆಯನ್ನು ಪೂರ್ತಿ ಹಾಡೋಣ....

ದಾಸರು ಹೇಳಿಕೊಟ್ಟರು—ಹುಡುಗರು ಲಯ ಬದ್ಧವಾಗಿ ಹಾಡಿದರು.

'ಪಂಕಜಾಕ್ಷ ನೀನು ಎನ್ನ | ಮಂಕುಬುದ್ಧಿ ಬಿಡಿಸಿ ನಿನ್ನ |
ಕಿಂಕರನ್ನ ಮಾಡಿಕೊಳ್ಳೊ | ಸಂಕರುಷಣ ||

ಏಸು ಜನ್ಮ ಬಂದರೇನು | ದಾಸನಾಗಲಿಲ್ಲ ನಾನು
ಘಾಸಿ ಮಾಡದಿರು ಇನ್ನು | ವಾಸುದೇವನೆ ||

ಬುದ್ಧಿ ಶೂನ್ಯನಾಗಿ ನಿನಗೆ | ಕದ್ದ ಕಳ್ಳನಾದೆ ನಾನು |
ತಿದ್ದಿ ಹೃದಯ ಶುದ್ಧ ಮಾಡೋ | ಪ್ರದ್ಯುಮ್ನನೆ ||

* * * *

ಜ್ಞಾನ ಭಕ್ತಿ ಕೊಟ್ಟು ನಿನ್ನ | ಧ್ಯಾನದಲ್ಲಿ ಇಟ್ಟು ಎನ್ನ |
ಹೀನ ಬುದ್ಧಿ ಬಿಡಿಸೋ ಮುನ್ನ | ಶ್ರೀಜನಾರ್ದನ ||

ಜಪತಪಾನುಷ್ಠಾನವನ್ನು | ಒಪ್ಪುವಂತೆ ಮಾಡಲಿಲ್ಲ |
ತಪ್ಪು ಕೋಟಿ ಕ್ಷಮಿಸಬೇಕೊ | ಉ-ಪೇಂದ್ರನೆ ||

ಮೊರೆಯ ನಿಡುವೆನಯ್ಯ ನಿನಗೆ | ತ್ವರದಿ ಭವದ ಸೆರೆಯ ಬಿಡಿಸೊ |
ಇರಿಸೊ ಭಕ್ತರೊಳಗೆ ಪರಮ | ಪುರುಷ ಶ್ರೀ ಹರೇ ||

ಪುಟ್ಟಿಸಲೇ ಬೇಡವಿನ್ನು । ಪುಟ್ಟಿದಕೆ ಪಾಲಿಸಯ್ಯ ।
ಇಷ್ಟು ಮಾತ್ರ ಬೇಡಿಕೊಂಬೆ ಶ್ರೀ ಕೃಷ್ಣನೇ ||

*    *    *    *

ಮರೆಯದಲೆ ಹರಿಯ ನಾಮ । ಬರೆದು ಓದಿ ಕೇಳುವರಿಗೆ
ಕರೆದು ಮುಕ್ತಿ ಕೊಡುವನೆಲೆ । ಯಾದಿಕೇಶವ ||

ಎಲ್ಲರೂ ದಾಸರು ಹೇಳಿಕೊಟ್ಟಂತೆ ಹೇಳುವರು.

ಕಲ್ಯಾಣಾದ್ಭುತ ಗಾತ್ರಾಯ ಕಾಮಿತಾರ್ಥ ಪ್ರದಾಯಿನೇ ।
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ಮಂಗಳಂ ||

"ಹೋಗಿಬನ್ನಿ ದೇವರು ಒಳ್ಳೆಯದನ್ನು ಕರುಣಿಸಲಿ"

"ನಮಸ್ಕಾರ ದಾಸರೆ, ನಮಸ್ಕಾರ"



## ದಾಸಸಾಹಿತ್ಯದ ಕಿರುಪರಿಚಯ

ಕನ್ನಡ ಭಕ್ತಿ ಸಾಹಿತ್ಯದ ಅಂಕುರಾರ್ಪಣವಾದದ್ದು ಶ್ರೀ ನರಹರಿ ತೀರ್ಥರ ಕಾಲದಲ್ಲಿ. ಈ ಅಂಕುರವು ಮೊಳೆತು ಹಬ್ಬಿ ಹರಡಲು ಕಾರಣ ರಾದವರು ಮುಳುಬಾಗಲು ಮಠದ ಸಂಸ್ಥಾಪಕರಾದ ಶ್ರೀ ಶ್ರೀಪಾದರಾಜರು. ಅವರ ಶಿಷ್ಯರಾದ ಶ್ರೀ ವ್ಯಾಸರಾಯರ ಕಾಲದಲ್ಲಿ ಅದು ಹಂದರವೇರಿ ಪಸರಿ ಸಿತು. ಅವರೊಡನೆ ಹೆಗಲೆಣೆಯಾಗಿ ನಿಂತು ನಾರದಾಂಶ ಸಂಭೂತರಾದ ಪುರಂದರದಾಸರು, ಭಾವೀಸಮೀರರಾದ ಶ್ರೀ ವಾದಿರಾಜ ಶ್ರೀಪಾದಂಗಳು ಮತ್ತು ಯಮಾಂಶ ಸಂಭೂತರಾದ ಕನಕದಾಸರು ಭಕ್ತಿ ಲತೆಯು ಪೂರ್ಣ ವಿಕಾಸ ಹೊಂದುವಂತೆ ಮಾಡಿದರು. ಈ ಭಕ್ತಿಸಾಹಿತ್ಯದ ಅಮೃತಫಲ ವನ್ನುಂಡು ಜೀರ್ಣಿಸಿಕೊಂಡ ಪ್ರಜಾಕೋಟಿ ಇದ್ದ ಕಾಲ ೧೫ ಮತ್ತು ೧೬ನೇ ಶತಮಾನ. ಆ ಕಾಲ ಮುಂದಿನ ತಲೆಮಾರಿನವರಿಗೆ ಸುವರ್ಣ ಯುಗ ವಾಯಿತು. ನಾಡು ಸಮೃದ್ಧವಾಯಿತು. ಇತಿಹಾಸದಲ್ಲಿ 'ಮರೆಯಲಾಗದ ವಿಜಯನಗರ ಸಾಮ್ರಾಜ್ಯ'ವೆಂಬ ಕೀರ್ತಿಯನ್ನು ದೇಶವಿದೇಶದ ಚರಿತ್ರಕಾರ ರಿಂದ ಪಡೆದ ನಾಡು ಕನ್ನಡ ನಾಡಾಯಿತು. ಇಂದಿಗೂ ಭಾರತದಲ್ಲಿ ಆ ಭಕ್ತಿಸಾಹಿತ್ಯದ ಸೌಗಂಧದ ಕಿಂಚಿತ್ ಅಳಿದುಳಿದಿರುವ ಪ್ರಭಾವದಿಂದಾಗಿ ಕನ್ನಡನಾಡು ಆಧ್ಯಾತ್ಮಿಕ ಕೇಂದ್ರವಾಗಿದೆ, ಶಾಂತಿಯ ಬೀಡಾಗಿದೆ ಎಂದರೆ ತಪ್ಪಾಗದು.

ದಾಸ ಸಾಹಿತ್ಯದ ಬೇರು ಸದಾಗಮಗಳಲ್ಲಿ ಭದ್ರವಾಗಿ ಪಸರಿಸಿದೆ. ಅದು ವೇದ, ಉಪನಿಷತ್ತು, ಪುರಾಣಗಳು, ರಾಮಾಯಣ ಮಹಾಭಾರತ ಗಳಲ್ಲಿರುವ ಸಾರವನ್ನು ಹೀರಿ, ಭಕ್ತಿಲತೆಗೆ ಪೋಷಣೆಯನ್ನೊದಗಿಸಿದೆ. ಆಗಮ ಕ್ಷೇತ್ರದಲ್ಲಿದ್ದ ಭಕ್ತಿವಿರೋಧೀ ಕಂಟಕಾದಿಗಳನ್ನು ದೂರ ಮಾಡಿ,

ತತ್ವಜ್ಞಾನದ ಹೆಸರಿನಲ್ಲಿ ಭಕ್ತಿಲತೆಯ ತಾಯಿಬೇರಾದ ಭಾಗವತಧರ್ಮಕ್ಕೆ ಅಂಟಿದ್ದ ರೋಗಾಣುಗಳನ್ನು ಪೂರ್ಣಪ್ರಜ್ಞರು ತಮ್ಮ ಹರಿತಮತಿಯಿಂದ ನಿರ್ವೀರ್ಯಗೊಳಿಸಿದ್ದ ಕಾರಣ ಕನ್ನಡ ನುಡಿಯಲ್ಲಿ ಪುಂಖಾನುಪುಂಖವಾಗಿ ನಿರ್ಮಲ ಭಕ್ತಿಲತೆ ಹಬ್ಬಿ ಹರಡುವಂತಾಯಿತು ಅದು ಇಂದಿಗೂ ಹಚ್ಚ ಹಸುರಾಗಿ ಹಂಬುತ್ತಿದೆ

ಭಾಗವತಧರ್ಮ ಅಥವಾ ಸನಾತನ ಧರ್ಮವೇ ಭಕ್ತಿಯ ಜೀವಾಳ. ವಿಶ್ವದ ಸೃಷ್ಟಿ, ಸ್ಥಿತಿಲಯಗಳಿಗೆ ಕಾರಣವಾದ ಸರ್ವೋತ್ತಮ ಸ್ವತಂತ್ರ ತತ್ವವೇ ಭಗವಂತ. ಜೀವ ಜಡಾತ್ಮಕ ಪ್ರಪಂಚ ಆತನ ನಿಯಮನಕ್ಕೊಳ ಪಟ್ಟಿದ್ದು. ಆತನೇ ಜೀವರು ಸ್ವರೂಪಭೂತ ಯೋಗ್ಯತಾನುಸಾರ ಐಹಿಕ ಹಾಗೂ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಿಕೊಳ್ಳಲು ಈ ಸತ್ಯವಾದ ಸಾಧನ ಭೂಮಿಯನ್ನು ಒದಗಿಸಿ ಕೊಟ್ಟಿರುವ ಕರುಣಾಳು. ಆತನ ಪ್ರಸಾದ ದಿಂದ ಪರಮ ಪುರುಷಾರ್ಥವಾದ ಮೋಕ್ಷವನ್ನು ಪಡೆಯಲು, ಜೀವರು ತಮ್ಮ ಇತಿಮಿತಿಯನ್ನರಿತು, ಪರಮಾತ್ಮನಲ್ಲಿ ಅತಿಶಯಿತ ಭಕ್ತಿಯನ್ನು ಮಾಡ ಬೇಕು. ಭಕ್ತಿ ಎಂದರೆ ಪರಮಾತ್ಮನಲ್ಲಿ ಮಹಿಮಾತಿಶಯ ಜ್ಞಾನ ಪೂರ್ವಕ ಮಾಡುವ ಅಸ್ಖಲಿತ ಸ್ನೇಹ. ತಾವು ಪರಮಾತ್ಮನ ಕಿಂಕರರೆಂಬ ಎಚ್ಚರ. ಆ ಎಚ್ಚರವನ್ನಿಟ್ಟುಕೊಂಡು ಜಗದೊಡೆಯನ ಸಂತೃಪ್ತಿಗಾಗಿ ಜೀವನ ಯಾಪನ ಮಾಡುವುದರಲ್ಲೇ ಜೀವನದ ಸಾರ್ಥಕ್ಯ. ಅದೇ ಸಾಧನ. ಗುರುಹಿರಿಯರಲ್ಲಿ ಭಕ್ತಿ, ಸಮಾನಸ್ಕಂಧರಲ್ಲಿ ಸ್ನೇಹ, ಕಿರಿಯರಲ್ಲಿ ವಾತ್ಸಲ್ಯ, ದೀನಹೀನರಲ್ಲಿ ಅನುಕಂಪೆ, ಕರ್ತವ್ಯದಲ್ಲಿ ನಿಷ್ಠೆ, ಪರಮಾತ್ಮ ಕೊಟ್ಟಿದ್ದರಲ್ಲಿ ತೃಪ್ತಿ, ದಾನಧರ್ಮ ಪರೋಪಕಾರದಲ್ಲಿ ಅದಮ್ಯ ಉತ್ಸಾಹ, ಪುರಸ್ಕಾರ ತಿರಸ್ಕಾರಗಳಿಗೆ ಮಾರುಹೋಗದೆ, ಹರಿಚಿತ್ತ ಸತ್ಯ ಎಂದು ನಂಬಿ ತಲ್ಲಣಿಸದೆ, ಸಕಲವೂ ಹರಿಸೇವೆ ಎಂಬ ಭಾವದಿಂದ ಬಾಳುವುದೇ ಜೀವನದರ್ಶನ. ಇದನ್ನು ಜನರಾಡುವ ಭಾಷೆಯಲ್ಲಿ ತಿಳಿಸಿಕೊಡುವ ಸಾಹಿತ್ಯವೇ ದಾಸ

ಸಾಹಿತ್ಯ. ಸಂಗೀತದ ಮಧುಲೇಪನದಿಂದ, ಸರಳತೆಯ ಸೌಗಂಧದಿಂದ, ಅನುಭವದ ರಸಪಾಕದಿಂದ ಸತ್ಸಿದ್ಧಾಂತ ಪ್ರಮೇಯಗಳನ್ನು, ಸಮಾಜ ಧರ್ಮ, ಲೋಕಧರ್ಮ, ಸ್ತ್ರೀಧರ್ಮ ಮೊದಲಾದ ಗಹನ ವಿಷಯಗಳನ್ನು ವ್ಯಕ್ತಿಯಲ್ಲಿರುವ ಪಾಶವೀ ಪ್ರವೃತ್ತಿಯನ್ನು ಹತ್ತಿಕ್ಕಲು ಮತ್ತು ದೈವೀ ಸಂಪತ್ತನ್ನು ಹೆಚ್ಚಿಸಲು ನಾಡನುಡಿಯಲ್ಲಿ ಹಾಡಿಪಾಡಿದ ಸಾಹಿತ್ಯ ದಾಸ ಸಾಹಿತ್ಯ. ಈ ಸಾಹಿತ್ಯದಲ್ಲಿರುವ ಓಘ, ಲಾಲಿತ್ಯ ಪ್ರಾಸಾದಿಗಳು ಚಿತ್ತಾ ಕರ್ಷಕ. ಪದಗಳು, ಸುಳಾದಿಗಳು, ಉಗಾಭೋಗಗಳು, ಮುಂಡಿಗೆಗಳು, ನಿಂದಾಸ್ತುತಿಗಳು, ಒಗಟುಗಳು, ವಾವೆ ಪದಗಳು ಎಲ್ಲವೂ ರುಚಿರ ಮನೋಹರ.

ದಾಸಸಾಹಿತ್ಯದಲ್ಲಿ ಹೇಳಿರುವಂತೆ ಜೀವನವನ್ನು ರೂಢಿಸಿಕೊಂಡ ವ್ಯಕ್ತಿಗೆ ಮನಸ್ಸಿನ ಸಮತೋಲನ ಎಂಥ ವಿಷಮ ಸನ್ನಿವೇಶದಲ್ಲೂ ತಪ್ಪದು. ಭಗವಂತನನ್ನು ನಂಬಿದವರಿಗೆ ಉಂಟೆ ಭವದ ರಾಗದ್ವೇಷಾದಿ ಬಂಧನ ? ಹರಿಚಿತ್ತ ಸತ್ಯ, ನರಚಿತ್ತಕ್ಕೆ ಬಂದುದು ಲವಲೇಶ ನಡೆಯದು ಎಂದರಿತವ ನಿಗೆಲ್ಲಿದೆ ತಲ್ಲಣ ? ತವಕ ? ಅವನು ಲೌಕಿಕಾಪೇಕ್ಷೆಯನ್ನು ಗೆದ್ದ ಧೀರ. ಅವನಿಗೆ ಶ್ರೀಹರಿಯು ತನ್ನ ಹೃದಯ ಮಂಟಪದಲ್ಲಿ ನೆಲಸಿರಲೆಂಬ ಹೆಬ್ಬಯ ಕೆಯನ್ನು ಬಿಟ್ಟರೆ ಏನೂ ಬೇಕಿಲ್ಲ. 'ನಾನಿನ್ನನೇನೂ ಬೇಡುವುದಿಲ್ಲ' ಎಂದೇ ಪ್ರತಿಜ್ಞೆಮಾಡುತ್ತಾನೆ. ಹರಿದಾಸರು ಈ ಬಗೆಯ ಜೀವನವನ್ನು ನಡೆಸಿದ ಅನುಭಾವಿಗಳು. ಜ್ಞಾನಿಗಳು. ವೈರಾಗ್ಯದ ಖನಿಗಳು. ಆದ್ದರಿಂದ ಅವರ ಬೋಧನೆಯಲ್ಲಿ ಅನುಭವದ ಕಸುವಿದೆ. ಮನಮುಟ್ಟಿ ಬದಲಿಸುವ ಮೋಡಿ ಇದೆ.

ಕನಕದಾಸರ ಸಾಹಿತ್ಯದಲ್ಲಿ ದಾಸಸಾಹಿತ್ಯದ ಸಕಲ ಮುಖಗಳನ್ನೂ ಕಾಣಬಹುದು. ಅವರು ಮುಟ್ಟಿದ್ದೆಲ್ಲ ಚಿನ್ನ. ಅವರು ಆಶುಕವಿಗಳು.

ಅವರ ಕೆಲವು ಕೃತಿಗಳನ್ನು ಅವಲೋಕಿಸಿದಾಗ ಅವುಗಳನ್ನು ರಚಿಸಿದ ಸಂದರ್ಭಗಳನ್ನು ಕಲ್ಪಿಸಿಕೊಳ್ಳಬಹುದು ಅವರ ತಿಳಿ ಹಾಸ್ಯ, ವಿಮರ್ಶಾತ್ಮಕ ಹರಿತ ಮತಿ, ಅವರ ಪುರಾಣೇತಿಹಾಸಗಳಲ್ಲಿರುವ ಆಳವಾದ ಜ್ಞಾನ, ಮತ್ತು ಅವರ ಕೃತಿಗಳನ್ನು ಅವಿಸ್ಮರಣೀಯವಾಗಿ ಮಾಡಿರುವ ಅನುಭವದ ರಸಪೂರ –ಇವು ನಮಗರಿವಾಗುವುದು. ಅವರ ಶೈಲಿ ಅವರಿಗೇ ಮೀಸಲು. ಒಂದೆರಡು ಉದಾಹರಣೆಗಳನ್ನು ಇಲ್ಲಿ ಕೊಡಲಾಗಿದೆ.

ಒಮ್ಮೆ ಕನಕದಾಸರು ಶ್ರೀ ವ್ಯಾಸತೀರ್ಥರಿಂದ ವೈಷ್ಣವದೀಕ್ಷೆ ಪಡೆದು ದಾಸನಾಗುವುದಕ್ಕೆ ಮುಂಚೆ, ಢಣನಾಯಕನಾಗಿದ್ದಾಗ ಶತ್ರುಗಳಿಂದ ಅಹತನಾಗಿ ರಣರಂಗದಲ್ಲಿ ನಿಶ್ಚೇಟಿತನಾಗಿ ಮಲಗಿದ ಸಂದರ್ಭದಲ್ಲಿ, ಅವರ ಬಾಯಿಂದ ಹೊರಟಿರಬಹುದಾದ ಆಶು ಕವಿತೆ ಹೀಗಿದೆ :

ಪರಮಪುರುಷ ನೀನೇ ಕಾಯಿ ।
ಕಾಯಿ, ಕಾಯಿ, ಎನ್ನ ತಲೆ ಕಾಯಿ ॥ ಪ ॥

ಸರಸಿಯೊಳಗೆ ಕರಿ ಕೂಗಿರೆ ಕಾಯಿ ।
ಹಿಂದು ಮಾಡಿದ ಪಾಪ ನುಗ್ಗೀ ಕಾಯಿ ॥

ಹರಿ ನಿನ್ನ ಧ್ಯಾನ ಬಾಳೇ ಕಾಯಿ ।
ಹರಿ ಕಾಯಿ ನೀ ಕಾಯಿ, ಎನ್ನ ತಲೆಕಾಯಿ ॥

ಕರಿರಾಜಗೊಲಿದನೆಂಬದನೆಕಾಯಿ ।
ಕ್ರೂರವ್ಯಾಧಿಗಳೆಲ್ಲ ಹೀರೇ ಕಾಯಿ ॥

ಘೋರ ದುಷ್ಕೃತಗಳು ತೋರೇ ಕಾಯಿ ।
ವಾರಿಜಾಕ್ಷನೇ ಗತಿ ಎಂದಿಪ್ಪೇ ಕಾಯಿ ॥

ಭಾರತ ಕಥೆ ಕರ್ಣ ತುಂಬೇ ಕಾಯಿ |
ಮುರಹರ ನಿನ್ನ ವರವರೇ ಕಾಯಿ ||

ಹರಿಕರುಣಾಮೃತ ಉಣಿಸಿ ಕಾಯಿ |
ಉರಗಾಧಿಪತಿಯೆಂಬ ಹೆಸರ ಕಾಯಿ ||

ತನ್ನ ದಾಸನಾಗೆಂದು ಹಲವು ಬಾರಿ ಆದಿಕೇಶವ ಸ್ವಪ್ನದಲ್ಲಿ ಆದೇಶ ವಿತ್ತಿದ್ದರೂ, "ಏಕೆ ದಾಸನಾಗಬೇಕು" ? ಎಂದೇ ಮಾರುತ್ತರಿಸುತ್ತಿದ್ದ ಕನಕನ ಹೃದಯ ಭಗವಚ್ಚಿಂತನೆಯಿಂದ ಬಡಿಯಲಾರಂಭಿಸಿದ ಪ್ರಸಂಗ ವದು. ಭಕ್ತಪರಾಧೀನನಾಗಿ ಹಲವಾರು ಭಕ್ತರನ್ನು ಕೈಹಿಡಿದು ಕಾಪಾಡಿದ ಆ ಅವ್ಯಕ್ತ ಮೂರ್ತಿಯನ್ನು ಅನನ್ಯ ಭಕ್ತಿ ಶ್ರದ್ಧೆಯಿಂದ ಚೀರುತ್ತಾ ಹಾಡಿದ ಮೊದಲ ಕೃತಿ ಇದು. ಇದರಲ್ಲಿ ಅನೇಕ ಕಾಯಿಪಲ್ಲೆಗಳನ್ನು ಹೆಸರಿಸಿದ್ದಾರೆ. ಅವರ ಸಾಹಿತ್ಯ ರಚನಾ ಪ್ರತಿಭೆ ಮತ್ತು ಚಮತ್ಕಾರ ಇದರಲ್ಲಿ ವ್ಯಕ್ತವಾಗಿದೆ. "ಹೀರೇಕಾಯಿ, ನುಗ್ಗೇಕಾಯಿ, ಬಾಳೇಕಾಯಿ, ಬದನೇಕಾಯಿ, ಹಿಪ್ಪೇಕಾಯಿ, ತೊರೇ (ಸೋರೇ) ಕಾಯಿ, ತುಂಬೇ ಕಾಯಿ, ಅವರೇಕಾಯಿ, ಹುಣಿಸೀಕಾಯಿ ಮತ್ತು ಹೆಸರಕಾಯಿ" – ಎಂಬ ಕಾಯಿಪಲ್ಯಗಳನ್ನು ಪರಿಚಯಿಸುತ್ತದೆ.

ದಾಸರ ಮುಂದಿನ ಕೃತಿಯಲ್ಲಿ ಅವರ ವೈಷ್ಣವ ಭಕ್ತಿಯ ಪರಾಕಾಷ್ಠೆ ಯನ್ನು ನಾವು ಕಾಣಬಹುದು. ಕಂಡು ಕಂಡ ವಸ್ತುಗಳನ್ನು ದೇವರೆಂದು ನಂಬಿ ಕುರಿ ಕೋಣಗಳನ್ನು ಕಡಿದು ಬಲಿ ಕೊಡುತ್ತಿದ್ದ ಭಕ್ತರ ಮೌಢ್ಯ ವನ್ನು ನೋಡಿ ಆ ಮಟ್ಟದ ಜನರನ್ನು ಎಚ್ಚರಿಸಿ ಮೇಲೆತ್ತಲೆಂದು ನಗುತ್ತಾ ಅಂದರು.

ಕಣಿಯ ಹೇಳಬಂದೆ ನಾರಾಯಣನಲ್ಲ ದಿಲ್ಲವೆಂದು
ಬಿನುಗು ದೈವದ ಗೊಡವೆ ಬೇಡಿ ನರಕ ತಪ್ಪದೋ

ಕೂಳದವರ ಮಾತು ಕೇಳಿ ಖೂಳರೆಲ್ಲರು ಕೂಡಿ ಕೊಂಡು |
ಹಾಳು ಮಾಡಿ ಕೈಯಲಿದ್ದ ಹೊನ್ನ ಹಣಗಳ ||
ಬಾಳುತಿಪ್ಪ ಕೋಣ ಕುರಿಯು ಏಳಬೀಳ ಕೊರಳ ಕೊಯಿದು |
ಬೀಳಬೇಡಿ ನರಕಕೆಂದು ಹೇಳ ಬಂದೆನೋ ||

ಹೊಳ್ಳದ ಬಿಚ್ಚೇರು ತಾವು ಸುಳ್ಳರೆಲ್ಲರು ಕೂಡಿಕೊಂಡು |
ಬೆಳ್ಳನೆ ಬೆಳತನಕ ನೀರ ತಡಿಯಲ್ಲಿ ಕುಳಿತು ||
ಗುಳ್ಳ ಗೊರಜೆ ಕೂಡಿ ತಿಂದು ಕಳ್ಳು ಕೊಡನ ಬರಿದು ಮಾಡಿ |
ಇಂಥ ಪೊಳ್ಳು ದೈವದ ಗೊಡನೆ ಬೇಡ ನರಕ ತಪ್ಪದು ||

(ಈ ಪದ್ಯದಲ್ಲಿ ಬಂದಿರುವ ಕೆಲವು ಕಠಿಣ ಪದಗಳ ವಿವರ :- ಕೂಳದವರು – ಆವೇಶದಿಂದ ಕೂಡಿ ಕುಣಿವ ಭಕ್ತರು, ಹೊಳ್ಳರ – ನೀಚರಾದ, ಬಿಚ್ಚೇರು – ಭಿಕ್ಷೆ ಎತ್ತುವವರು, ಕಳ್ಳು ಕೊಡವ – ಹೆಂಡದ ಪಾತ್ರೆ )

ಮೇಲ್ಕಂಡ ಕೃತಿಯಲ್ಲಿ ಪ್ರತಿಪಾದಿತವಾಗಿರುವ ವಿಷಯವೇದರೆ ವಿಷ್ಣು ಸರ್ವೋತ್ತಮ, ಪ್ರಾಣಿ ಬಲಿಯ ಖಂಡನೆ ಮತ್ತು ನಿರ್ಮಲ ಭಕ್ತಿಯಿಂದಲೇ ಭಗವತ್ಸಾನ್ನಿಧ್ಯ ಪ್ರಾಪ್ತಿ ಎಂಬುದು

ಒಮ್ಮೆ ತಿರುಪತಿ ಕ್ಷೇತ್ರ ದರ್ಶನಕ್ಕಾಗಿ ಹೊರಟಿದ್ದ ದಾಸರು ವೇಳೆ ಮೀರಿದರೂ ಶ್ರೀನಿವಾಸನ ದರ್ಶನವಾಗದೇ ಹಿಂತಿರುಗುತ್ತಿದ್ದಾಗ, ಭಗವಂತನಿಂದ ಸ್ವಪ್ನದಲ್ಲಿ ಆದೇಶಗೊಂಡ ಮಹಂತ ಕನಕದಾಸರನ್ನು ಹುಡುಕಿಸಿ ಗುಡಿಗೆ ಕರೆತರಲುದ್ಯುಕ್ತನಾಗಿ ತನ್ನ ಸೇವಕರನ್ನು ಕಳಿಸುತ್ತಾನೆ. ಅವರು ಬಂದು ಕನಕದಾಸರನ್ನು ಪ್ರಶ್ನಿಸಿದಾಗ ಹೇಳಿದ ಉತ್ತರ; "ಕನಕದಾಸರೆಲ್ಲಿ ಎಂದಿರಾ ? ಓ, ಮುಂದೆ ಹೋಗುವವರಿಗೆ ಹಿಂದೆ, ಹಿಂದೆ ಬರುವವರಿಗೆ

ಮುಂದೆ" ಎನ್ನುತ್ತಾರೆ. ಮಾತಿನಲ್ಲೂ ಮೊನೆ, ಅದರ ಹಿಂದಿನ ಗೂಢಾರ್ಥದ ಜೊತೆಗೇ ತತ್ವದ ಹೊಸೆತ ! ದಾಸರ ಮಾತಿನಿಂದ ಏನೊಂದೂ ಅರ್ಥ ಕಾಣದ ಭಟರು ನೀವು ಯಾತರವರು ? ಎಂದು ಪ್ರಶ್ನಿಸಿದಾಗ ದಾಸರೆಂದರು :–

ಯಾತರವನೆಂದು ಸುರಲಿ ಜಗನ್ನಾಥ ಮಾಡಿದ ನೀ ನರಜನ್ಮವ |
ಇಂದ್ರಿಯ ಸೂತಕ ಮಲ ಮೂತ್ರ ದುರ್ಗಂಧ ||
ದಿಂದ ಬಂದೇನು ನಾ ನಿಜವರಿಯದೆ
ಬಂದದ್ದು ಮೂತ್ರ ಕುಳಿ, ತಿಂದದ್ದು ಮೊಲೆ ಮಾಂಸ |
ಹಿಂದೆ ಹೀಗಿರಲದಿನ್ನೇತರ ಕುಲವಯ್ಯ ? ||

ಹಚ್ಚಡದ ಮೇಲಿನ್ನು ರೊಚ್ಚು ಬಿದ್ದಂತೆ ತನು |
ಮುಚ್ಚಿಕೊಂಡಿದ್ದು ಹೆಣಗಾಡುತ ||
ನಿಶ್ಚಿಂತ ನಿರ್ದೋಷ ನೆಲೆಯಾದಿ ಕೇಶವನ |
ಹುಚ್ಚೇರಿದೆನಗೆ ಇನ್ಯಾತರ ಕುಲವಯ್ಯ ? ||

ಇಲ್ಲಿ ನಾವು ಕಾಣುವುದು ಅವರ ಕುಲದ ಮಾತನ್ನಲ್ಲ, ಭಕ್ತಿಯ ಪಾರಮ್ಯ ತನಗೆ.

ಸಂಜೆಯವರೆಗೂ ದೇವರ ದರ್ಶನವಾಗದೆ ಹತಾಶರಾದಾಗ ದಾಸರು ತಿರುಮಲೇಶನನ್ನು ಕೆಣಕಿ ಹಾಡಿದರು :–

ಶೇಷಗಿರಿಯ ಮೇಲೆ ವಾಸಮಾಡಿಕೊಂಡ
ದೇಶ ದೇಶಕ್ಕೆ ಪ್ರಸಾದ ಮಾರುವೆಯಲ್ಲೊ ||
ಆಶೆ ತೋರಿ ಹಣ ಕಾಸು ಗಳಿಸುವ ನಮ್ಮ
ಕೇಶವ ಆದಿನಾರಾಯಣ ಸ್ವಾಮೀ ||

ಬಂದೆನೊ ನಾ ನಿನ್ನಾ ಬಳಿಗೆ ।
ಇಂದು ನಿನ್ನಾ ಮದುವೆಗೆ ಬಾರೆಂದ್ಯೆಲ್ಲೊ ||

ದೇವರ ದರ್ಶನವಿಲ್ಲದೆ, ಛಳಿಯಲ್ಲಿ ನಡುಗುತ್ತಾ ಜಗುಲಿಯೊಂದರ ಮೇಲೆ ವಿಶ್ರಮಿಸುತ್ತಿದ್ದ ದಾಸರ ಮ್ಯೆಮೇಲೆ ದೇವರಿಗೆ ಹೊದಿಸಿದ್ದ ಪೀತಾಂಬರ ಕಾಣಬಂದು, ದಾಸರನ್ನು ಶಿಕ್ಷೆಗೆ ಗುರಿಮಾಡಿದಾಗ, ದಾಸರ ಮ್ಯೆಮೇಲೆ ಬಿದ್ದ ಪ್ರತಿಯೊಂದು ಏಟು ಶಿಲಾ ಮೂರ್ತಿಯ ಮ್ಯೆಮೇಲೆ ಬಾಸುಂಡೆಗಳಾಗಿ ವ್ಯಕ್ತವಾದವು. "ಸಾಕು ಪ್ರಭೋ ನಿನ್ನ ಸಹವಾಸ, ನೀನು ತೋರಿಸಿದ ನಿನ್ನ ಮದುವೆಯ ಉಡುಗೊರೆ ನೆನಸಿಕೊಳ್ಳುವಂತಿದೆ" ಎಂದು ಹೇಳುತ್ತಾ ಭಗವಂತನ ದಶಾವತಾರ ಲೀಲೆಗಳನ್ನು ನಿಂದಾಸ್ತುತಿ ಯಲ್ಲಿ ಹಾಡಿದರು :–

ನಿನ್ನ ನಾನೇನೆಂದೆನೋ ವೆಂಕಟರಾಯ
ನೀನೆನ್ನ ಸಲಹ ಬೇಕೋ ||
ನಿನ್ನನಾ ನೇನೆಂದೆ ನಿಗಮ ಗೋಚರ ಸ್ವಾಮಿ
ಪನ್ನಂಗಶಯನ ಪಾಲ್ಗಡಲೊಡೆಯನೇ ಹರೇ ||

* * * *

ಬತ್ತಲಿದ್ದವನೆಂದೆನೇ ತೇಜಿಯನೇರಿ
ಒತ್ತಿ ಆಳ್ದವನೆಂದೇನೇ ಬಾರಿ ಬಾರಿಗೂ
ಮತ್ತೆ ಪುಟ್ಟದೆ ಎಂದೇನೇ ಆದಿಕೇಶವ
ಭಕ್ತವತ್ಸಲನೆಂದು ಪೊಗಳಿದೆನಲ್ಲದೆ ?

ದಾಸರ ಸಾಹಿತ್ಯ ಕೇವಲ ಮಡಿವಂತರಿಗೆ ಮಾತ್ರವಾಗಿರದೆ, ಇತರ ಜಾತಿಯವರಿಗೂ ಅವರಿಗೆ ಅರ್ಥವಾಗುವ ಸರಳ ರೀತಿಯ ಗ್ರಾಮ್ಯ ಶ್ಯೆಲಿ

ಯಿಂದಲೂ ರಚಿತವಾಗಿತ್ತೆನ್ನುವುದಕ್ಕೆ ಇದೆ ಒಂದು ನಿದರ್ಶನ. ಅವರ ಕೃತಿ "ದೇವಿ ನಮ್ಮ ದ್ಯಾವರು ಬಂದರು, ಬನ್ನಿರೊ ನೋಡ ಬನ್ನಿರೊ"– ಎಂಬುದು ಈ ಕೃತಿಯಲ್ಲಿ ತಮ್ಮದೇ ಆದ ಶೈಲಿಯಲ್ಲಿ ಭಗವಂತನ ಕೃಷ್ಣಲೀಲೆ ಮತ್ತು ದಶಾವಾತಾರಗಳ ವರ್ಣನೆಯನ್ನು ಕಾಣಬಹುದು.

ಇನ್ನು ಎಂಜಲಿನ ಬಗ್ಗೆ ಹೇಳುತ್ತಾರೆ, ಯಾವ ಕವಿಯೇ ಆಗಲೀ, ಬರಹಗಾರನಾಗಲೀ ಮಹರ್ಷಿ ವೇದವ್ಯಾಸ ದೇವರಿಂದ ರಚಿತವಾದ ಮತ್ತು ಸೂತಪುರಾಣಿಕರಿಂದ ಶೌನಕಾದಿಗಳಿಗೆ ಉಪದೇಶಿತವಾದ ವೇದ ಉಪನಿಷತ್ತು ಮತ್ತು ಪುರಾಣಗಳನ್ನು ಆಧರಿಸಿದ್ದು, ಎಲ್ಲ ಶಬ್ದಗಳೂ, ಇವುಗಳಿಂದಲೇ ಆರಿಸಲ್ಪಟ್ಟವಾದ್ದರಿಂದ ಎಲ್ಲವೂ ಎಂಜಲುಮಯ ಎನ್ನುವಂತೆ ಆರ್ಥೈಸಿದರು. ಪಂಚಾಮೃತಕ್ಕೆ ಸಲ್ಲುವ ಕ್ಷೀರವೂ ಕರುವ ಎಂಜಲಷ್ಟೆ ? ಆಗ್ರೋದಕದ ವಾರಿ ಜಲ ಚರ ದೆಂಜಲಷ್ಟೆ ? ಎಂದು ಪ್ರಶ್ನಿಸುತ್ತಾರೆ, ತಮ್ಮ ಹರಿಭಕ್ತಿ ಸಾರದ ಒಂದು ಪದ್ಯದಲ್ಲಿ.

ಕಾಲ ಪ್ರವಾಹದಲ್ಲಿ ಜೀವರುಗಳು ದೇಹ ಧಾರಣೆ ಮಾಡಿ ಬರುವ ಒಂದೊಂದು ಜನ್ಮವೂ ಒಂದೊಂದು ನಿಲ್ದಾಣದಂತೆ ಎಂದರು ದಾಸರು. ಜೀವರನ್ನು ನಾನಾ ಜನ್ಮದಿ ಬಂದ ನಾಟಕದ ಗೊಂಬೆಯೇ ಸರಿ ಎಂದರು.

ನೆಚ್ಚದಿರು ಸಂಸಾರ ನೆಲೆಯಲ್ಲ ಮೀಕಾಯ
ಅಚ್ಯುತನ ನಾಮವನು ನೆನೆದು ಸುಖಿಯಾಗೋ

ಗಳಿಸದಿರು ಸೀಮೆಯನು ಗಳಿಸದಿರು ದ್ರವ್ಯವನು |
ಗಳಿಸದಿರು ನೀ ದುರಿತ ರಾಶಿಗಳನು ||
ನಳಿನನಾಭನ ನಿತ್ಯ ನಾಮವನು ನೆನೆನೆನೆದು |
ನೆಲೆಯಾದ ಪರಮ ಪದವಿಯ ಪಡೆಯೊ ಮನವೆ ||

ನೋಡದಿರು ಪರ ಸತಿಯ, ಕೂಡದಿರು ದುರ್ಜನರ ।
ಆಡದಿರು ಮಾತುಗಳ ಗರ್ವದಿಂದ ॥
ಬೇಡದಿರು ಕೈಯ ಹಿಂದಕೆ ತೆಗೆವ ಲೋಭಿಯನು, ಕೊಂ ।
ಡಾಡದಿರು ಬೀದಿಗೊಳುಂಬ ದೈವಗಳ ॥

ನಾನಾ ಜನ್ಮದಿ ಬಂದೆ ನಾಟಕದ ಬೊಂಬೆಯಿದು ।
ಮಾನಕ್ಕೆ ನೀ ಮೆಚ್ಚಿ ಮರುಳಾಗದೆ ॥
ಜಾಣತನದಿಂ ಕಾಗಿ ನೆಲೆಯಾದಿ ಕೇಶವನ ।
ಮಾನಸದಲದ ನೆನೆದು ಸುಖಿಯಾಗು ಮನನೆ ॥

ಭಗವಂತನನ್ನು ಮೆಚ್ಚಿಸಲು ಭಕ್ತನಾದವನು ಏನನ್ನು ತಾನೇ ಕೊಟ್ಟು ಪೂರೈಸಲು ಸಾಧ್ಯ ? ಭಗವಂತನಿಗೆ ಯಾವುದಕ್ಕೆ ಕೊರತೆ ? ಭಗವತ್ಸೃಷ್ಟಿಯಲ್ಲಿ ಪ್ರಾಪ್ತವಾಗುವ ಪ್ರತಿಯೊಂದು ವಸ್ತುವೂ ಅವನದೇ. ಆದರೂ ಅವುಗಳನ್ನೇ ಭಕ್ತ ಪೂರ್ಣವಾಗಿ ಅರ್ಪಿಸಿದಾಗ ಅನಂತ ಫಲವನ್ನು ನೀಡುತ್ತಾನಷ್ಟೆ. ಈ ಎಲ್ಲ ಭಾವನೆಗಳ ಸಮಾವೇಶವನ್ನು ಮತ್ತೊಂದು ಕೃತಿಯಲ್ಲಿ ಕಾಣಬಹುದು.

ಆವ ಪರಿಯಲಿ ನಿಮ್ಮ ನೋಲಿಸಿ ಮೆಚ್ಚಿಸ ವಿಧವು ।
ಅಣು ಮಾತ್ರ ತೋರದಲ್ಲ ॥

ಫಣಿರಾಜನಾಸನದಿ ಕುಳಿತಿಹಗೆ ಅರಿವೆಯಾಸನವ ನಾನೆಂತ್ಹಾಸಲಿ
ಘನವಾದ ಗಂಗೆಯನು ಪಡೆದವಗೆ ಕಳಸನೀರನದೆಂತು ಮೈಗೆರೆಯಲಿ
ತನುವಿನ ಪರಿಮಳವು ಘಮಘಮಿಸುವಗೆ ಚಂದನವದೆಂತು ನಾ ಪೂಸಲಿ
ಅನವರತ ನಾಭಿಯೊಳು ಶತಪತ್ರವಿಹಗೆ ಮಿಕ್ಕಿನಪೂವ ಮುಡಿಸಲೆಂತೈ ದೇವ?
ವನಜಜಾಂಡ ಕೋಟಿ ಉದರಂಗೆ ಅವುದನುಣಿಸಿ ತೃಪ್ತಿಯ ಮಾಡಲಿ ?

ಅನಿಮಿಷರಿಗಮೃತವನ್ನೆರೆದವಗೆ ತೃಷೆಯ ನೀರಿನೊಳೆಂತು ಸಂತಸಡಲಿ ?
ವಿನತೆಯಾತ್ಮಜ ಪಕ್ಷದ ನಿಲವಿರೆ ಬದಲು ಬೀಸಣಿಗೆ ಇನ್ನೇಂ ಬೀಸಲಿ ?
ಅಣುರೇಣು ಪರಿಪೂರ್ಣ ಮೂರುತಿಗೆ ನಾ
ಪ್ರದಕ್ಷಿಣೆಯೆಂತು ಸುತ್ತಿ ಬರಲಿ ದೇವ ?

ಮಿಗೆ ಫಣಿಯ ಫಣದಾತ ಪತ್ರ ವಿರುವಗೆ ನೆರಳಿಗೆ
ಕೊಡೆಯ ನೇಂ ಪಿಡಿಯಲಿ ?

ಪಗಲಿರುಳು ಸಾಮಗಾನ ಪ್ರಿಯನ ಮುಂದೆ ಗೀತೆಗಳ ನಾನೇಂ ಪಾಡಲಿ ?
ಜಗವರಿಯೆ ಲಕ್ಷ್ಮೀದೇವಿ ಪತಿಗೆಷ್ಟು ಹೊನ್ನುಗಳ ದಕ್ಷಿಣೆಯ ಕೊಡಲಿ ?
ನಿಗಮ ತತಿ ಕಾಣದ ಮಹಿಮನಿಗೆ ನಮಿಸುವ
ಬಗೆಯ ನಾನರಿವೆನೆಂತೈ, ದೇವ ?

ಒಲಿಸುವುದ ನರಿಯೆ ಮೆಚ್ಚಿಸುವ ಬಗೆಯರಿಯೆ
ಹೊಗಳುವ ಹೊಲಬ ನಾ ನರಿಯೆನು

ತಿಳಿದುದಿಲ್ಲವು ಷೋಡಷೋಪಚಾರದ
ಪೂಜೆಗಳಲೊಂದು ಪರಿಯಾದರು

ನೆಲೆಯುಗಾಣೆನೊ ನಿಗಮ ಶಾಸ್ತ್ರ ನವವಿಧ
ಭಕ್ತಿಯೊಳಗೊಂದು ಬಗೆ ಯಾದರು

ಅಳಿಲ ಸೇವೆಯ ನೊಪ್ಪಿಕೊಂಡು ಶರಣನ ಸಲಹೊ
ನೆಲೆಯಾದಿ ಕೇಶವನೆ ಸ್ವಾಮಿ, ಪ್ರೇಮಿ

ಮೇಲ್ಕಂಡ ಕೃತಿಯಲ್ಲಿ ಸ್ವರಮಣನಾದ, ಸ್ವಯಂಸಂಪೂರ್ಣನಾದ ಭಗವಂತನ ಅಚಿಂತ್ಯಾದ್ಭುತ ಲೀಲೆಗಳನ್ನು ಅವನ ಮಹಿಮೋಪೇತವಾದ ವ್ಯಾಪಾರಗಳನ್ನು ವರ್ಣಿಸುತ್ತಾ, ಭಕ್ತಿಯೊಂದೇ ಅವನನ್ನು ಒಲಿಸಿ ಕೊಳ್ಳುವ ಮಾರ್ಗವೆಂದು ಸಾರಿರುತ್ತಾರೆ

ಅಸ್ವತಂತ್ರರಾದ ಜೀವರುಗಳನ್ನು ಪರಮಾತ್ಮ ಹೇಗೆ ಎಲ್ಲ ಕಾಲ ಗಳಲ್ಲೂ ಸಂರಕ್ಷಿಸುತ್ತಾನೆಂಬುದನ್ನು ಸೋದಾಹರಣವಾಗಿ ವಿಶ್ಲೇಷಿಸುತ್ತಾರೆ

ಅವರು ಇನ್ನೊಂದು ಕೃತಿಯಲ್ಲಿ, ತಲ್ಲಣಿಸದಿರು ಕಂಡ್ಯ ತಾಳು ಮನವೇ ಎಲ್ಲರನು ಸಲಹುವನು ಇದಕ್ಕೆ ಸಂಶಯವಿಲ್ಲ, ಎಂಬ ಕೃತಿಯಲ್ಲಿ ಜನನ ಪೂರ್ವದಲ್ಲಿ ತಾಯಗರ್ಭದಲ್ಲಾಗ ಪೋಷಿಸುವರಾರು ಎಂದು ಎಚ್ಚರಿಸುತ್ತಾರೆ.

ಪ್ರಾರಬ್ಧ ತನವನ್ನು ಅನುಭವಿಸಿಯೇ ತೀರಬೇಕೆಂಬ ಸಿದ್ಧಾಂತವನ್ನು ದಾಸರು ಸಮರ್ಥಿಸುವ ಶೈಲಿಯೇ ಬೇರೆ.

ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ
ಖ್ಯಾತಿಯಿಂದಲಿ ರಾವಣನ ಕೊಲ್ಲಿಸಿ
ಸೀತೆಯನು ತಂದು ಶ್ರೀರಾಮನಿಗೆ ಕೊಡಲಾಗಿ
ಪ್ರೀತಿಯಲಿ ಕೌಪೀನ ಬಿಡಿಸಲಿಲ್ಲ ಹರಿಯು ||

ಲೋಕಾದಿ ಲೋಕಗಳ ಚಲಿಸುವ ರವಿ ರಥಕ್ಕೆ
ಏಕ ಗಾಲಿಯು ಏಳು ಕುದುರೆಗಳ ಕಟ್ಟಿ
ಲೋಕ ಲೋಕಗಳೆಲ್ಲ ಚಲಿಸುವ ಅರುಣನಿಗೆ
ಬೇಕೆಂದು ಚರಣಗಳ ಕೊಡಲಿಲ್ಲ ಹರಿಯು

ಸಾಸಿರನಾಮದ ಒಡೆಯಾದಿ ಕೇಶವನ ।
ಬೇಸರಿಲ್ಲದೆ ಹೆಗಲ ಮೇಲಿಟ್ಟು ಕೊಂಡು ||
ಆಕಾಶ ಮಾರ್ಗದಲಿ ತಿರುಗುವ ಗರುಡನಿಗೆ
ನಾಸಿಕದ ಡೊಂಕು ತಾ ತಿದ್ದಲಿಲ್ಲ ಹರಿಯು

ಹೀಗಿರುವಾಗ ಇನ್ನು ಉಳಿದ ನಮ್ಮಂಥವರ ಪಾಡೇನು ! ಉತ್ತರವಿಷ್ಟೆ ? "ಅವಶ್ಯಂ ಅನುಭೋಕ್ತವ್ಯಂ".

"ಮೆಲ್ಲಗಾನೆಯ ಹೂಜಿಗಳ ಬಾಯಲಿ ಹಿಡಿಸಿಕೊಡು"- ಎನುತ ಕೃಷ್ಣ ತನ್ನ ಲೀಲೆಗಳನ್ನು ತೋರಿ ಎಲ್ಲರನ್ನೂ ನಕ್ಕುನಗಿಸಿದರೆ, ಕನಕದಾಸರು

ಶ್ರೀಮನ್ಮಹಾಭಾರತವನ್ನು ಒಂದು ಬಗೆಯ ಬೊಂಬೆಯಾಟವೆಂದೇ ವಿಶ್ಲೇಷಿಸಿ, ಅದರ ಸಾರಸರ್ವಸ್ವವನ್ನು – ೫ ಪದ್ಯಗಳ ಕೃತಿಯೊಂದರಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಬೊಂಬೆಯಾಟವನಾಡಿಸಿದೆ ಮಹಾಭಾರತದ
ಅಂಬುಜ ಭವಾದ್ಯಮರರು ನೋಡುತಿರಲು ||

ಕುರುಭೂಮಿ ಎಂತೆಂಬ ಪುರವೀಧಿಯನು ರಚಿಸಿ
ಮರೆಯುಮಾಯದ ಐದು ತೆರೆಯ ಹಾಕಿ ||
ಧರಣೀಶರೆಂಬ ನರಪ್ರತಿಮೆಗಳ ಅಳವಡಿಸಿ |
ನರನ ರಥ ವಾಜಿಯ ಸೂತ್ರವನೆ ಪಿಡಿದು ||

ಓದುವನು ನಾರದನು, ವಾದ್ಯಗಾರನು ಶಂಭು
ಬಾದರಾಯಣದೇವ ಕಥಾ ಪ್ರಸಂಗಿ ||
ಮೇದಿನಿಯ ಹೊರೆಗಳೆವ ಮೃತ್ಯುವಿನ ಹಾಸ್ಯರಸ |
ವೇದನಿಕರಗಳು ಕೈವಾರಿಸುತ್ತಿರಲು ||

ಹದಿನೆಂಟು ಅಕ್ಷೌಹಿಣಿ ಸೈನ್ಯ ಬಲನಡೆಸಿ |
ಹದಿನೆಂಟುದಿನ ಕದನ ನಾಟ್ಯ ನಡೆಸಿ ||
ಅಧರೊಳೈವರ ನುಳಿಸಿ ಭೂಮಿ ಭಾರವ ನಿಳಿಸಿ |
ಮುದದಿ ಬ್ರಹ್ಮಕಪಾಲವನು ತೃಪ್ತಿಗೊಳಿಸಿ ||

ಲೋಕದೊಳಗಿದನೈದನೆಯ ವೇದವೆಂದೆನಿಸಿ |
ಪಾಕಶಾಸನ ಸಭೆಯನು ಮೆಚ್ಚಿಸಿ ||
ಈ ಕಥೆಯ ಕೇಳಿದ ಜನಮೇಜಯನ ಪತಿಕರಿಸಿ
ಕಾ ಕಪಟನಾಟಕದ ಸೂತ್ರಧರನೆನಿಸಿ ||

ಇಂತೆಸೆವ ಲೀಲಾವಿನೋದ ರಚನೆಗಳಿಂದಲೇ |
ಕಾಂತರಂಗಳನು ಸಂಚರಿಸುತ ||
ಸಂತಸದಿ ಭರತ ಸಂಸಾರವನು ಪೊರೆವ ಕೃಪೆ
ಯಾಂತೆಸೆವ ಕಾಗಿನೆಲೆಯಾದಿ ಕೇಶವರಾಯ ||

ಕಲ್ಪಕಲ್ಪಗಳಲ್ಲಿ ಜೀವರಾಶಿಗಳನ್ನು ನಾನಾ ಯೋನಿಗಳಲ್ಲಿ ತಂದು ಸೂತ್ರದ ಬೊಂಬೆಗಳನ್ನಾಗಿ ಮಾಡಿ ತಾನು ಕುಣಿಸುವನಷ್ಟೆ ಶ್ರೀಹರಿ. ದ್ವಾಪರದಲ್ಲಿ ಕೌರವ ಪಾಂಡವರಿಗೆ ಒದಗಿದ ಕುರುಕ್ಷೇತ್ರದ ಸಮರದಲ್ಲಿ ಜಗನ್ನಾಟಕ ಸೂತ್ರಧಾರನಾದ ಕೃಷ್ಣನಪಾತ್ರ ಹಿರಿದು. ಅವನು ಪಾಂಡವರ ಪಕ್ಷ ವಹಿಸಿ, ಕೌರವರ ಅರ್ಥಾತ್ ಅಧರ್ಮದ ದಮನವನ್ನು ಮಾಡಿದವನು ಆದರೆ ಲೋಕ ದೃಷ್ಟಿಯಿಂದ ಕೌರವರ ನಾಶಕ್ಕೆ ಪಾಂಡವರು ಕಾರಣರೆಂದು ಕಂಡರೂ, ಕೌರವರು ತಮ್ಮನ್ನು ತಾವೇ ನಾಶಪಡಿಸಿಕೊಂಡರೆಂದೂ, ಕೌರವನು ಯಾರಲ್ಲಿ ಅಚಲವಾದ ನಂಬಿಕೆಯನ್ನಿಟ್ಟುಕೊಂಡು, ಅವರೇ ತನ್ನನ್ನೂ ತನ್ನ ಸಾರ್ವಭೌಮತ್ವವನ್ನೂ ಕಾಪಾಡುವರೆಂದು ನಂಬಿದ್ದನೋ ಅವರೇ ಕೌರವನ ಕುಲಕ್ಕೆ ಮಾರಕರಾದರು ಎಂಬುದನ್ನು ಮತ್ತೊಂದು ಕೃತಿಯಲ್ಲಿ ವರ್ಣಿಸುತ್ತಾರೆ.

ಬಂದಿದೆ ದೂರು ಬರಿದೆ ಪಾಂಡವರಿಗೆ || ಪ ||
ಕೊಂದವರಿವರು ಕೌರವರ ನೆಂಬಪಕೀರ್ತಿ || ಅ || ಪ ||

ಮುನ್ನಿನ ವೈರದಿ ಕಡು ಸ್ನೇಹವ ಮಾಡಿ |
ಉನ್ನಂತಲೆತ್ತ ಪಗಡೆಯಾಡಿಸಿ ||
ತನ್ನ ಕುಹಕದಿಂದ ಕುರು ಬಲವನು ಕೊಂಚ ||
ಗನ್ನಘಾತಕ ಶಕುನಿಯೊ – ಪಾಂಡವರೋ ?

ಮರಣ ತನ್ನಿಚ್ಛೆಯೊಳುಳ್ಳ ಗಾಂಗೇಯನು
ಧುರದಲಿ ಷಂಡನ ನೆವದಿಂದಲಿ
ಸರಳ ಮಂಚದ ಮೇಲೆ ಮಲಗಿ ಮೊಮ್ಮಗನನ್ನು
ಕೊರಳ ಕೊಯ್ದವ ಭೀಷ್ಮನೋ, ಪಾಂಡವರೋ ?

ಮಗನ ನೆವದಿ ಕಾಳಗವ ಬಿಸುಟು ಸುರ
ನಗರಿಗೆ ನಡೆದು ವೈರಾಗ್ಯದಿಂದ
ಜಗವರಿಯಲು ಕುರುವಂಶಕೆ ಕೇಡನು
ಬಗೆದು ಕೊಂದವ ದ್ರೋಣನೋ, ಪಾಂಡವರೋ ?

ತೊಟ್ಟ ಬಾಣವ ತೊಡಲೊಲ್ಲದೆ ಮಾತೆಗೆ
ಕೊಟ್ಟ ಭಾಷೆಗೆ ನಾಲ್ವರ ಕೊಲ್ಲದೆ
ನೆಟ್ಟನೆ ರಣ ಮುಖದಲಿ ತನ್ನ ಪ್ರಾಣವ
ಬಿಟ್ಟು ಕೊಂದವ ಕರ್ಣನೋ, ಪಾಂಡವರೋ ?

ಮಥನಿಸಿ ಸೂತತನವ ಮಾಡಿ ರಣದೊಳಗೆ
ಅತಿ ಹೀನಗೆಳೆಯುತ ರವಿಸುತನ
ರಥದಿಂದಿಳಿದು ಪೋಗಿ ಕೌರವ ಬಲವನು
ಹತಮಾಡಿದವ ಶಲ್ಯನೋ, ಪಾಂಡವರೋ ?

ಜಲದೊಳು ಮುಳುಗಿ ತಪವ ಮಾಡಿ ಬಲವನು
ಛಲದಿಂದೆಬ್ಬಿಸಿ ಕಾದುವೆನೆಂದವ
ಕಲಿಭೀಮಸೇನನ ನುಡಿಗೇಳಿ ಹೊರ ಹೊರಟು
ಕುಲವ ಕೊಂದವ ಕೌರವನೋ, ಪಾಂಡವರೋ ?

ಕೌರವ ಪಾಂಡವರಿಗೆ ಭೇದ ಹುಟ್ಟಿಸಿ
ಫೌಜೊಡ್ಡಿ ಕುರು ಕ್ಷೇತ್ರದಿ ಕಾದಿಸಿ
ಸಂಶಯವಿಲ್ಲದೆ ಕುರು ಬಲವನು ಕೊಂದ
ಹಿಂಸಕನಾದಿ ಕೇಶವನೊ ಪಾಂಡವರೊ ?

ಇವರ ವಿಮರ್ಶಾ ದೃಷ್ಟಿಯು ಹೊಸತನ ಚಿತ್ತಾಕರ್ಷಕ. ಇನ್ನು ಇವರ ಸಾಹಿತ್ಯವನ್ನೂ ವೈರಾಗ್ಯದ ವಿಷಯವನ್ನೂ ಗಮನಿಸಿದರೆ ಮಾನವ ದೇಹದ ಮಹತ್ವ, ಸಾಧನಾ ಶರೀರ ಬಂದಾಗ ಜೀವರುಗಳ ಕರ್ತವ್ಯ ಏನೆಂಬ ಪ್ರಶ್ನೆಯನ್ನು ಮೂಡಿಸುತ್ತವೆ. ಒಂದು ಕೃತಿಯಲ್ಲಿ ಹೇಳುತ್ತಾರೆ :

ಹುಟ್ಟುತೇನೂ ತಾರಲಿಲ್ಲ, ಸಾಯುತೇನೂ ಒಯ್ಯಲಿಲ್ಲ
ಸುಟ್ಟುಸುಟ್ಟು ಸುಣ್ಣದ್ಹರಳು ಆಯಿತೀ ದೇಹ ।
ಹೊಟ್ಟೆ ಬಲು ಕೆಟ್ಟದೆಂದು ಎಷ್ಟು ಕಷ್ಟ ಮಾಡಿದಾಗ್ಯೂ
ಬಿಟ್ಟು ಹೋಗುವಾಗ ಗೇಣುಬಟ್ಟೆಗಾಣದು ॥

ಹತ್ತು ಎಂಟುಲಕ್ಷ ಗಳಿಸಿ ಮತ್ತೆ ಸಾಲದೆಂದು ಪರರ
ಅರ್ಥಕಾಗಿ ಆಸೆ ಬಟ್ಟು ನ್ಯಾಯ ಮಾಡುವರು ।
ಬಿತ್ತಿ ಬೆಳಸು ತನ್ನದೆಂಬೊ ವ್ಯರ್ಥ ಚಿಂತೆಯನ್ನು ಮಾಡಿ,
ಸತ್ತುಹೋದ ಮೇಲೆ ಅರ್ಥ ಯಾರಿಗಾಗೊದು ?

ವಾರ್ತೆ ಕೀರ್ತಿ ಎಂಬೊವೆರಡು ಬಂದವಯ್ಯ ಸತ್ತ ಮೇಲೆ
ವಸ್ತು ಪ್ರಾಣನಾಯಕನು ಎಲ್ಲಿ ದೊರಕ್ಯಾನು ?
ಕರ್ತೃ ಕಾಗಿನೆಲೆಯಾದಿ ಕೇಶವನ್ನ ಚರಣ ಕಮಲ
ನಿತ್ಯದಲ್ಲಿ ಭಜಿಸಿ ಸುಖಿಯಾಗಿ ಬಾಳೆಲೊ ॥

ಪರಾತ್ಪರ ವಸ್ತುವಾದ ಪರಮಾತ್ಮನನ್ನು ಗುಣಪೂರ್ಣನೆಂದು ಸ್ವರಮಣನೆಂದು ಬಲ್ಲವರ್ಯಾರ್ಯಾರು ? ಎಲ್ಲರೂ ಅಲ್ಲ, ಹಲಕೆಲವರು ಮಾತ್ರ ಎಂಬುದನ್ನು ಇನ್ನೊಂದು ಕೃತಿಯಲ್ಲಿ ಹೆಸರಿಸುತ್ತಾರೆ.

ಬಲ್ಲವರಿನಿಬರು ಎಲ್ಲಾರು ಅರಿಯರು
ಫುಲ್ಲಲೋಚನ ಪೂರ್ಣ ಬ್ರಹ್ಮನೆಂಬುದನು ||

ಶುಕ ಯೋಗೀಶ್ವರ ಬಲ್ಲ ಸುಗುಣ ನಾರದ ಬಲ್ಲ
ಭಕುತ ಪ್ರಹ್ಲಾದ ಬಲ್ಲ ಬಲಿಯು ಬಲ್ಲ |
ರುಕುಮಾಂಗದ ಬಲ್ಲ ಋಷಿ ಪರಾಶರ ಬಲ್ಲ
ಮಕರ ಕುಂಡಲ ಧರ ಪರಮಾತ್ಮ ನೆಂಬುದನು ||

ವಸಿಷ್ಠ ಮುನಿ ಬಲ್ಲ ವರ ವಿಭೀಷಣ ಬಲ್ಲ
ವಿಶಿಖ ಶಯನ ಬಲ್ಲ ವಿದುರ ಬಲ್ಲ |
ರಸಿಕ ವಾಲ್ಮೀಕಿ ಬಲ್ಲ ರಾಜ ಜನಕ ಬಲ್ಲ
ಶಶಿಮಿತ್ರ ನೇತ್ರ ಸರ್ವೋತ್ತಮನೆಂಬುದನು ||

ವಾಘೇಯಕ್ರೂರ ಬಲ್ಲ ವಚನದಿ ಶೌನಕ ಬಲ್ಲ
ಯೋಗಿ ಕಪಿಲ ಬಲ್ಲ ಭೃಗು ಬಲ್ಲನೋ |
ತ್ಯಾಗಿ ಧರ್ಮಜ ಬಲ್ಲ ರಣದೊಳರ್ಜುನ ಬಲ್ಲ
ಕಾಗಿನೆಲೆಯಾದಿ ಕೇಶವ ನೆಂಬುದನು ||

ಕನಕದಾಸರು ಮುಂಡಿಗೆ ಪದಗಳ ರಚನೆಯಲ್ಲಿ ನಿಷ್ಣಾತರು; ಅಂದರೆ ಎಲ್ಲಿಂದಲೋ ಹೇಗೆ ಹೇಗೊ ವಕ್ರವಾಗಿ ಸುತ್ತಿ ಬಳಸಿ ಕೊನೆಯಲ್ಲಿ ಸರ್ವ

ಸಮರ್ಥ ಪರಮಾತ್ಮನಲ್ಲಿ ಪರ್ಯವಸಾನವಾಗುವಂತೆ ಅರ್ಥ ಬರುವ ಕೃತಿಗಳನ್ನು ರಚಿಸುವುದರಲ್ಲಿ ಸಿದ್ಧ ಹಸ್ತರಾಗಿದ್ದರು. ಸಜ್ಜನರ ಸಹವಾಸವನ್ನು ಬೇಡುವ ರೀತಿ ಹೀಗಿದೆ :

ತಂದೆಯೊಡಲನು ಸೀಳಿಸಿದವರೊಳು[1] ದೇ
ವೇಂದ್ರನ ತಲೆಗೆ ತಂದವರೊಳು[2] ದು |
ರ್ಗಂಧ ಪೆಣ್ಣಿಗೆ ಚಂದನದ ಕಂಪ ನಿತ್ತಂಥ[3]
ಬಾಂಧವರೊಳಗಿರಿಸು ಕಂಡ್ಯಾ ಎನ್ನನು ||

ತೋಯಜವೆಂಬ ಪುಷ್ಪದ ಪೆಸರವರೊಳು[4]
ತಾಯ ಸೊಸೆಗೆ ಮಕ್ಕಳಿತ್ತವರೊಳು[5] |
ಆಯದಿ ದ್ವಾದಶಿ ವ್ರತವ ಸಾಧಿಸಿದಂಥ[6]
ರಾಯರೊಳಿರಿಸು ಕಂಡ್ಯ ಎನ್ನನು ||

ಗಿಳಿ[7] ನಾಯಿ ಪೆಸರಿನವರೊಳು[8] ಮುಗಿಲ[9]
ಹೊಳೆಯ ಹೊಟ್ಟೆಲಿ ಹುಟ್ಟಿದವರೊಳು[10]
ಕೆಳದಿಯ ಜರಿದು[11] ಶ್ರೀಹರಿ ದಿನ ಗೆದ್ದಂಥ[12]
ಹಳಬರೊಳ್[13] ರಿಸು ಕಂಡ್ಯ ಎನ್ನನು ||

1. ಪ್ರಹ್ಲಾದ 2. ನಾರದರು 3, ಪರಾಶರರು 4. ಪುಂಡರೀಕ 5. ವೇದವ್ಯಾಸರು 6. ಅಂಬರೀಷ ಮಹಾರಾಜ 7. ಶುಕಮಹರ್ಷಿಗಳು 8. ಶೌನಕರು 9. ಗಂಗಾ 10. ಭೀಷ್ಮರು 11. ವಿಭೀಷಣ 12. ರುಕ್ಮಾಂಗದ 13. ಬಕದಾಲ್ಭ್ಯರು

ಅಂಕಕ್ಕೆ ರಥವ ನಡೆಸಿದವರೊಳು[1] ನಿ
ಶ್ಯಂಕೆ ಧರ್ಮವ ಗೆದ್ದ ಹಿರಿಯರೊಳು[2]
ಲಂಕೆಯ ಅನುದಿನ ಸ್ಥಿರ ರಾಜ್ಯವಾಳಿದ[3]
ಕಿಂಕರರೊಳಿರಿಸು ಕಂಡ್ಯ ಎನ್ನನು ||

ಕಾಟಿಗೆ ಕಾಸು ಕೊಟ್ಟವರು[4] ರಾಯರ ಪಂಕ್ತಿ
ಊಟವ ಬಯಸಿದಂತೆ ನಾ ಬೇಡಿದೆ
ನಾಟಕಧರ ನೆಲೆಯಾದಿ ಕೇಶವ ನೀ
ನ್ನಾಟ ದೊಳಿರಿಸು ಕಂಡ್ಯ ಎನ್ನನು ||

ಗೋಪಿಕಾಸ್ತ್ರೀಯೊಬ್ಬಳು ಶ್ರೀಕೃಷ್ಣನ ವಿರಹವೇದನೆಯಿಂದ ನೊಂದು, ತನ್ನ ದುಃಖವನ್ನು ಇನ್ನೊಬ್ಬ ಗೆಳತಿಯಲ್ಲಿ ತೋಡಿಕೊಳ್ಳುತ್ತಾ, ಸುಂದರಾಂಗನಾದ, ಮನ್ಮಥ ಮನ್ಮಥನಾದ ಕೃಷ್ಣನನ್ನುತನಗೆ ತೋರೆಂದು ಹಂಬಲಿಸುವ ಚಿತ್ರವನ್ನು ಈ ಮುಂಡಿಗೆಯಲ್ಲಿ ವರ್ಣಿಸುತ್ತಾರೆ :

ರಮಣಿ ಕೇಳಲೆ ಮೋಹನ ಶುಭಕಾಯನ
ಅಮರ ವಂದಿತ ರವಿ ಶತಕೋಟಿ ತೇಜನ ||ಪ||

ವಿಮಲ ಚರಿತ್ರದಿ ಮೆರೆವ ಶ್ರೀಕೃಷ್ಣನ
ಕಮಲ ವದನೆ ನೀ ತೋರೇ ರಮಣಿ ||ಅ. ಪ||

1. ಅರ್ಜುನ 2. ವಸಿಷ್ಠರು 3. ವಿಭೀಷಣ 4 ಗಂಜಿ

ಬಾಯೊಳಗಿಹ[1] ಗಂಡನ[2] ನಿಜ ತಮ್ಮನ[3]
ತಾಯ[4] ಪಿತನ[5] ಮಡದಿಯ[6] ಧರಿಸಿದನ[7]
ಸ್ತ್ರೀಯಳ[8] ಸುತನ[9] ಕೈಯಲ್ಲಿ ಶಾಪ ಪಡೆದನ[10]
ದಾಯಾದ್ಯನ[11] ಮಗನ[12]
ಸಾಯಕವದು[13] ತೀವ್ರದಿ ಬರುತಿರೆ ಕಂಡು
ಮಾಯಾ ಪತಿ[14] ಭೂಮಿಯ ನೊತ್ತಿ ತನ್ನಯ
ಬೀಯಗಾರನ[15] ತಲೆ ಗಾಯಿದಂಥ ||೧||

ನಾಲಿಗೆ ಎರಡರವನ[16] ಭುಂಜಿಸುವನ[17]
ಮೇಲೇರಿ ಬಹನ[18] ತಂದೆಯು[19] ಇಹ ಗಿರಿಯನು[20]
ಲೀಲೆಯಿಂದಲಿ ಕಿತ್ತೆತ್ತಿದ ಧೀರನ[21]
ಕಾಳಗದಲಿ ಕೊಂದನ[22]
ಲೋಲ ಲೋಚನೆಯ[23] ಮಾತೆಯ[24] ಪುತ್ರ[25] ನಣುಗನ[26]
ಮೇಲುಶಕ್ತಿಗೆ[27] ಉರವಾಂತು[28] ತನ್ನವರನ್ನು[29]

1 ಸರಸ್ವತೀದೇವಿ 2 ಬ್ರಹ್ಮದೇವರು 3 ಮನ್ಮಥ 4 ರಮಾದೇವಿಯರು
5 ಸಮುದ್ರರಾಜ 6 ಗಂಗಾ 7 ಶಿವ 8 ಪಾರ್ವತಿ 9 ಗಣಪತಿ
10 ಚಂದ್ರ 11 ಸೂರ್ಯ 12 ಕರ್ಣ 13 ಸರ್ಪಾಸ್ತ್ರ 14 ಕೃಷ್ಣ
15 ಅರ್ಜುನ 16 ಸರ್ಪ 17 ನವಿಲು 18 ಷಣ್ಮುಖ 19 ರುದ್ರ
20 ಕೈಲಾಸ 21 ರಾವಣ 22 ಶ್ರೀರಾಮ 23 ಸೀತಾದೇವಿ
24 ಭೂದೇವಿ 25 ನರಕಾಸುರ 26 ಭಗದತ್ತ 27 ವರಾಹಾಸ್ತ್ರ
28 ಕೃಷ್ಣ 29 ಪಾಂಡವರು

ಪಾಲಿಸಿದಂಥ ದಾತನಹ ದೇವನ
ಲೋಲೆ ನೀ ಕರೆದು ತೋರೇ ರಮಣಿ || ೨ ||

ಉರಿಯೊಳು ಜನಿಸಿದವನ[1] ನಿಜ ತಂಗಿಯ[2]
ಶರಗ ಪಿಡಿದ ಖಳ[3] ನಣ್ಣನ[4] ತಂಗಿಯ[5]
ವರನ[6] ತಲೆಯನು ಕತ್ತರಿಸಿದ ಧೀರನ[7]
ಗುರು[8] ವಿನೊಳುದಿಸಿದನ[9]
ಶರವ[10] ತಪ್ಪಿಸಿ ತನ್ನ ದಾಸರ್ಗೆ ಅನುದಿನ
ಕರೆದು ವರವನಿತ್ತು ಮನ್ನಿಸಿ ಸಲಹುವ
ಉರಗ ಗಿರಿಯ ವೆಂಕಟಾದಿ ಕೇಶವನ
ಗರತಿ ನೀ ಕರೆದು ತಾರೆ ರಮಣಿ || ೩ ||

ಮಂಗಳ ಮೂರ್ತಿಯಾದ ಆದಿಕೇಶವನಿಗೆ ಮಂಗಳವನ್ನು ಹಾಡುವುದಕ್ಕೂ ಒಂದು ಮುಂಡಿಗೆಯನ್ನೇ ಬಳಸಿದ್ದಾರೆ. ಅದರ ವೈಖರಿ ಹೀಗಿದೆ—

ಅಂಧಕ[11] ನನುಜನ[12] ಕಂದನ[13] ತಂದೆಯ[14]
ಕೊಂದನ[15] ಶಿರದಲ್ಲಿ ನಿಂದವನ[16]

1 ದುಷ್ಟದ್ಯುಮ್ನ 2 ದ್ರೌಪದಾದೇವಿ 3 ದುಶ್ಯಾಸನ 4 ದುರ್ಯೋಧನ 5 ದುಶ್ಶಲಾ 6 ಸೈಂಧವ 7 ಪಾರ್ಥ 8 ದ್ರೋಣ 9 ಅಶ್ವತ್ಥಾಮಳು 10 ನಾರಾಯಣಾಸ್ತ್ರ 11 ಧೃತರಾಷ್ಟ್ರ 12 ಪಾಂಡುರಾಜ 13 ಧರ್ಮರಾಯ 14 ಯಮ 15 ಈಶ್ವರ 16 ಚಂದ್ರ

ಚಂದದಿ ಪಡೆದನ[1] ನಂದನೆಯುಳ[2] ನಲ
ವಿಂದ ಧರಿಸಿದ ಮುಕುಂದನಿಗೆ[3]
ಜಯ ಮಂಗಳಂ ನಿತ್ಯ ಶುಭ ಮಂಗಳಂ

ರಥವನಡರಿ ಸುರ ಪಥದಲಿ ತಿರುಗುವ[4] ಸುತನಿಗೆ[5]
ಶಾಪವ ನಿತ್ತವನ[6] ಸತಿಯನು ತಡೆದನ[7] ಸತಿಯ[8]
ಜನನಿ[9] ಸುತ[10] ಸತಿಯರ[11] ನಾಳಿದ ಚತುರನಿಗೆ[12]
ಜಯ ಮಂಗಳಂ ನಿತ್ಯ ಶುಭ ಮಂಗಳಂ

ಹರಿಯ[13] ಮಗನ[14] ಶಿರ ತರಿದನ[15] ತಂದೆಯ[16]
ಹಿರಿಯ ಮಗನ[17] ತಮ್ಮನ[18] ಪಿತನ
ಭರದಿ[19] ಭುಜಿಸಿದನ ಶಿರದಲ್ಲಿ[20] ನಟಿಸಿದ[21]
ವರಕಾಗಿ ನೆಲೆಯಾದಿ ಕೇಶವಗೆ
ಜಯಮಂಗಳಂ ನಿತ್ಯ ಶುಭ ಮಂಗಳಂ

---

1 ಸಮುದ್ರರಾಜ 2 ರಮಾದೇವಿಯರು 3 ಶ್ರೀಹರಿ 4 ಸೂರ್ಯ 5 ಕರ್ಣ 6 ಪರಶುರಾಮದೇವರು 7 ರಾಮದೇವರು 8 ಸೀತಾದೇವಿ 9 ಭೂದೇವಿ 10 ನರಕಾಸುರ 11 16,000 ಮಂದಿ ಗೋಪಿಕೆಯರು 12 ಕೃಷ್ಣ 13 ಸೂರ್ಯ 14 ಕರ್ಣ 15 ಅರ್ಜುನ 16 ಪಾಂಡು 17 ಧರ್ಮರಾಯ 18 ಭೀಮಸೇನದೇವರು 19 ವಾಯು 20 ಸರ್ಪ (ಕಾಳಿಂಗ) 21 ಶ್ರೀಕೃಷ್ಣ



# ದಾಸರ ಸಾಹಿತ್ಯ ಕೃತಿಗಳು - ಕಿರುಪರಿಚಯ-೧

## ನಳಚರಿತ್ರೆ

ಕನಕದಾಸರ ಸಾಹಿತ್ಯ ಕೃತಿಗಳಲ್ಲಿ ನಳಚರಿತ್ರೆಯೂ ಒಂದು. ಇದೊಂದು ಪ್ರೇಮ ಕಾವ್ಯ. ಇದರ ವಸ್ತು ಮೂಲತಃ ಶ್ರೀಮನ್ ಮಹಾಭಾರತದ್ದು. ಲೋಮಶ ಮಹರ್ಷಿಗಳು ಧರ್ಮರಾಜನಿಗೆ ಹೇಳಿದ್ದು. ಅದನ್ನು ಆಧಾರವಾಗಿಟ್ಟುಕೊಂಡು ಕನಕದಾಸರು ಒಂದು ಷಟ್‌ಪದೀ ಛಂದಸ್ಸಿನಲ್ಲಿ ಕಾವ್ಯವನ್ನು ರಚಿಸಿರುವರು. ಇದರಲ್ಲಿ ದಮಯಂತಿಯ ಪ್ರೇಮ ನಿಷ್ಠೆ ಮತ್ತು ನಳಚಕ್ರವರ್ತಿಯ ತ್ಯಾಗ ಔದಾರ್ಯಾದಿ ಸದ್ಗುಣಗಳಿಗೆ ಚ್ಯುತಿಯನ್ನು ತರದ ನಿಷ್ಕಲಂಕ ಪ್ರೇಮದ ನಿರೂಪಣೆ ಹೃದಯಂಗಮವಾಗಿದೆ. ತಮ್ಮ ಪ್ರತಿಭಾ ಬಲದಿಂದ ಕನಕದಾಸರು ಲೌಕಿಕ ಪ್ರೇಮಕ್ಕೆ ಲೋಕೋತ್ತರ ಮೆರಗು ಬರುವಂತೆ ಮಾಡಿದ್ದಾರೆ.

ವಿದರ್ಭ ಎಂಬುದು ಭಾರತದಲ್ಲೊಂದು ರಾಜ್ಯ. ಭೀಮಸೇನ ಅಲ್ಲಿಯ ರಾಜ. ಅವನ ಮಗಳು ದಮಯಂತೀ. ಮಕ್ಕಳಿಲ್ಲದ ಭೀಮಸೇನ ಯಜ್ಞವನ್ನು ಮಾಡಿ ಈ ಮಗಳನ್ನು ಪಡೆದಿದ್ದ. ಇವಳು ಚೆಲುವಿನ ಸಾಕಾರ ಮೂರ್ತಿಯಾಗಿದ್ದಳು ಗುಣ, ಶೀಲ, ಸ್ವಭಾವದಲ್ಲಿ ಇವಳಿಗೆ ಸರಿ ಸಾಟಿಯೇ ಇರಲಿಲ್ಲ.

ಒಮ್ಮೆ ವಿದರ್ಭರಾಜಸಭೆಯಲ್ಲಿ ನಿಷಧರಾಜ ನಳನ ಪ್ರಸ್ತಾಪ ಬಂತು. ಕವಿಗಳು ಅವನ ಶೌರ್ಯ, ವೀರ್ಯ, ಪರಾಕ್ರಮಗಳನ್ನೂ ಶೀಲ, ಸೌಂದರ್ಯ, ನೈಪುಣ್ಯಾದಿ ಸದ್ಗುಣಗಳನ್ನೂ ಮುಕ್ತ ಕಂಠದಿಂದ ಕೊಂಡಾಡಿದರು. ಅಲ್ಲಿಯೇ ಇದ್ದ ದಮಯಂತಿ ಏಕಾಗ್ರಚಿತ್ತಳಾಗಿ ಎಲ್ಲವನ್ನೂ

ಕೇಳಿದಳು. ಮನಃಪಟಲದಲ್ಲಿ ಆತನ ಚಿತ್ರವನ್ನು ಮೂಡಿಸಿಕೊಂಡಳು. ಆ ಮೂರ್ತಿಯನ್ನು ಧ್ಯಾನ ಮಾಡತೊಡಗಿದಳು. ಅವನಲ್ಲೇ ಅನುರಕ್ತಳಾಗಿಬಿಟ್ಟಳು. ಆಹಾರ ವಿಹಾರಾದಿಗಳನ್ನು ಮರೆತಳು. ದಿನ ದಿನಕ್ಕೂ ಈ 'ಪೂರ್ವರಾಗ' ಬಲವಾಗುತ್ತಾ ಹೋಯಿತು. ಅವಳು ಅತ್ಯಂತ ವಿಹ್ವಲಳೂ ಅನನ್ಯಮನಸ್ಕಳೂ ಆದಳು.

ಇತ್ತ ನಿಷಧ ಭೂಪಾಲನ ರಾಜಸಭೆಯಲ್ಲಿ ಬ್ರಾಹ್ಮಣರು ಲೋಕೋತ್ತರ ಸುಂದರಿಯಾದ ದಮಯಂತಿಯ ವಿಷಯವನ್ನು ಪ್ರಸ್ತಾಪಿಸಿದರು. ಅದರಿಂದ ನಳಮಹಾರಾಜನ ಹೃದಯದಲ್ಲಿ ಪ್ರೇಮಾಂಕುರವಾಯಿತು. ಕಾಮದೇವನ ಆಕ್ರಮಣದಿಂದ ರಾಜ ತತ್ತರಿಸಿಹೋದ. ಆದಾಗ್ಯೂ ತನ್ನ ಕರ್ತವ್ಯ ಕರ್ಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದ.

ಒಮ್ಮೆ ಬೇಟೆಗಾರರೊಂದಿಗೆ ನಳ ಮಹಾರಾಜ ಮೃಗಯಾ ವಿಹಾರಕ್ಕೆ ಹೊರಟ. ವನ್ಯ ಮೃಗಗಳ ಸಂಹಾರಲೀಲೆಯಿಂದ ಸಂತೃಪ್ತನಾಗಿ ಹಿಂತಿರುಗುತ್ತಿರುವಾಗ ಹೊರ ಪ್ರಾಂತ್ಯದಲ್ಲಿದ್ದ ಜಲಾಶಯದ ಬಳಿ ವಿಶ್ರಮಿಸಿಕೊಳ್ಳಲು ಸಂಕಲ್ಪಿಸಿದ. ಅಲ್ಲಿ ರಾಜಹಂಸಗಳು ವಿಹರಿಸುತ್ತಿದ್ದವು. ಅವುಗಳ ಸೌಂದರ್ಯಕ್ಕೆ ಮಾರುಹೋದ. ಅತಿ ಚಾಣ್ಮೆಯಿಂದ ಅವುಗಳಲ್ಲಿ ಅತಿ ಸುಂದರವಾದ ಮರಾಳ ಒಂದನ್ನು ಜೀವಸಹಿತ ಹಿಡಿದುಬಿಟ್ಟ !

ಆ ಹಂಸ ಹೇಳಿತು :–

'ರಾಜ ! ನನ್ನನ್ನೂ ಕೊಲ್ಲಬೇಡ. ಬಿಟ್ಟುಬಿಡು. ಮತ್ತ ಗಜೇಂದ್ರನನ್ನು ಸೀಳುವ ಮೃಗೇಂದ್ರನು ನರಿಗಳನ್ನು ಬೇಟೆಯಾಡುವನೆ ? ನೀನೋ ಪರಾಕ್ರಮಿ. ಅರಿಭಯಂಕರ. ಆತತಾಯಿಗಳಿಂದ ರಕ್ಷಣೆಯನ್ನು ಕೊಡಲು ಅಸ್ತ್ರಶಸ್ತ್ರಗಳನ್ನು ಧರಿಸಿರುವೆ. ಅದನ್ನು ನಮ್ಮಂಥ ನಿರಪರಾಧಿ

ಗಳನ್ನು ಕೊಲ್ಲಲು ಬಳಸಬೇಡ. ಇದು ಪಾಪ. ಇಂಥ ಬುದ್ಧಿ ನಿನಗೆ ಬರಬಾರದು. ನಮ್ಮ ರುಚಿಕರವಾದ ಮಾಂಸಕ್ಕಾಗಿ ನಮ್ಮನ್ನು ಕೊಲ್ಲ ಬೇಕೆಂದು ಯೋಚಿಸಿದ್ದರೂ ಸರಿಯಲ್ಲ ಮಹಾರಾಜ, ನೀನೇನು ತಿಳಿಯದ ವನೆ? ಅರ್ಧ ಕುಡುಕೆ ಹಾಲಿನಿಂದ ದಾವಾಗ್ನಿಯನ್ನು ಆರಿಸಲಾದೀತೆ? ಹಿಮಕಣಗಳನ್ನು ಹೆಕ್ಕಿ ಎಂದಾದರೂ ಸರೋವರವನ್ನು ತುಂಬಿಸಲು ಸಾಧ್ಯವೆ? ರಾಜ! ನಮ್ಮನ್ನು ಕೊಲ್ಲಬೇಡ. ನಮಗೆ ಪ್ರಾಣ ಭಿಕ್ಷೆ ಯನ್ನು ನೀಡು, ಎಂದು ಅಂಗಲಾಚಿ ಬೇಡಿಕೊಂಡಿತು.

ರಾಜನು ಆ ಹಂಸದ ಚತುರೋಕ್ತಿಗಳಿಂದ ಪ್ರಭಾವಿತನಾದ. ಶರಣಾಗತ ವತ್ಸಲನಾದ ರಾಜನು ಅದನ್ನು ಬಿಟ್ಟುಬಿಟ್ಟ.

ಆ ರಾಜಹಂಸಕ್ಕೆ ಸಂತೋಷವಾಯಿತು. ರಾಜನ ಸದ್ಗುಣಕ್ಕೆ ಮಾರುಹೋದ ಹಂಸ ಹೇಳಿತು. 'ಮಹಾರಾಜ, ನಮ್ಮನ್ನು ಜೀವಸಹಿತ ಬಿಟ್ಟು ನೀನು ಮಹಾ ಉಪಕಾರ ಮಾಡಿದ್ದೀಯೆ. ನಿನಗೆ ಕೃತಜ್ಞರು. ನಿನಗೆ ಸಂತೋಷಕರವಾದ ಏನಾದರೂ ಕಾರ್ಯವನ್ನು ನಾವು ಮಾಡ ಬೇಕೆಂದಿದ್ದೇವೆ. ನೀನು ವಿದರ್ಭರಾಜಕುಮಾರಿಯ ಬಗ್ಗೆ ಕೇಳಿರುವೆಯಾ? ಅವಳಂಥ ಚೆಲುವೆ ಭೂಲೋಕದಲ್ಲಿ ಏಕೆ ಸ್ವರ್ಗಲೋಕ ಪಾತಾಳ ಲೋಕ ಗಳಲ್ಲೂ ಇಲ್ಲ. ಅವಳನ್ನು ನಿನಗಾಗಿ ಸಂದರ್ಶಿಸುವೆವು ಮತ್ತು ನಿಮ್ಮಿಬ್ಬರ ವಿವಾಹವನ್ನು ಕಣ್ತುಂಬ ನೋಡುವೆವು. ಸೌಂದರ್ಯ ಸದ್ಗುಣಗಳ ಸಂಬಂಧ ಎಷ್ಟು ಚೆನ್ನ!, ಎಂದು.

ರಾಜನು ಅನುಮೋದಿಸಿದ. ಹಾಗಾದರೆ ನೀವು ಹಿಂತಿರುಗಿ ಬರುವ ವರೆಗೂ ಇದೇ ಉದ್ಯಾನವನದಲ್ಲಿರುವೆ ಎಂದು ಹೇಳಿದ ಹಂಸಗಳು ಹಾರಿ ಹೋದವು.

ಹಂಸಗಳು ದಮಯಂತಿಯನ್ನು ಅತಿ ಸುಲಭವಾಗಿ ಭೇಟಿಯಾದವು. ಅವಳು ಆ ದಿನ ಜಲವಿಹಾರಕ್ಕೆಂದು ಅರಮನೆಯ ಸರೋವರಕ್ಕೆ ಬಂದಿದ್ದಳು. ಅವಳೊಡನೆ ತಮ್ಮ ಮೃದುಮಧುರ ಇಂಚರದಿಂದ ನಳ ಮಹಾರಾಜನ ಸೌಶೀಲ್ಯಾದಿ ಸದ್ಗುಣಗಳನ್ನೂ ಅಂಗಾಂಗ ಸೌಷ್ಟವವನ್ನೂ ವರ್ಣಿಸಿದವು ಮುಗ್ಧೆಯಾದ ದಮಯಂತಿ ಮನಬಿಚ್ಚಿ ಅವುಗಳೊಡನೆ ಮಾತನಾಡಿದಳು. ತಮ್ಮ ಕೆಲಸವು ದೈವ ಸಹಾಯದಿಂದ ಸಫಲವಾಯಿತೆಂದು ಬಗೆದು ನಳಮಹಾರಾಜನ ಬಳಿಗೆ ಸಾರಿ ಬಂದವು. ದಮಯಂತಿಯ ಪ್ರೇಮ ಸಂದೇಶವನ್ನು ಮುಟ್ಟಿಸಿದವು.

ವಿದರ್ಭ ನರೇಶನು ತನ್ನ ಮಗಳಿಗೆ ಯೋಗ್ಯನಾದ ವರನನ್ನು ಕಾಣಲು ಸ್ವಯಂವರಕ್ಕೆ ವ್ಯವಸ್ಥೆ ಮಾಡಿದನು. ದೇಶವಿದೇಶಗಳಿಂದ ಸುಂದರ ಶೂರ ವೀರ ರಾಜಕುಮಾರರು ಬಂದು ಸೇರಿದರು. ನಳಮಹಾರಾಜನೂ ಅಲ್ಲಿಗೆ ಹೊರಟನು.

ಇತ್ತ ಸ್ವರ್ಗಾಧಿಪತಿ ಇಂದ್ರನು ನಾರದರ ಬಾಯಿಂದ ದಮಯಂತಿಯ ಸೌಂದರ್ಯವನ್ನೂ ಸ್ವಯಂವರ ವಾರ್ತೆಯನ್ನೂ ಕೇಳಿದ. ದಮಯಂತಿಯಲ್ಲಿ ಅನುರಕ್ತನಾದ. ಊರ್ವಶಿಯನ್ನು ಕರೆಸಿದ. ಅವಳ ಕೈಗೆ ದಿವ್ಯವಾದ ವಸ್ತ್ರಾಲಂಕರಣಾದಿಗಳನ್ನಿತ್ತು "ಇವುಗಳನ್ನು ದಮಯಂತಿಗೆ ಕೊಟ್ಟು ಅವಳು ನನ್ನನ್ನು ವರಿಸುವಂತೆ ಮಾಡು" ಎಂದು ಆಜ್ಞಾಪಿಸಿದ. ಆ ದೇವಾಂಗನೆ ದೂತಿಯಾಗಿ ಹೊರಟಳು. ನಂತರ ದೇವೇಂದ್ರನು ವರುಣ ವಾಯು ಮತ್ತು ಯಮ – ಇವರೊಂದಿಗೆ ವಿದರ್ಭನಗರಿಗೆ ರಥಾರೂಢನಾಗಿ ಹೊರಟ.

ದಾರಿಯಲ್ಲಿ ನಳಮಹಾರಾಜನಿಗೂ ಆ ನಾಲ್ಕು ದಿಕ್ಪಾಲಕರಿಗೂ ಸಮಾಗಮವಾಯಿತು. ಸೂರ್ಯೋಪಮ ತೇಜೋವಂತರಾದ ಆ ನಾಲ್ವ

ರಿಗೆ ನಳ ವಂದಿಸಿದ. ಅವರು ನಳನ ಲೋಕೋತ್ತರ ವ್ಯಕ್ತಿತ್ವವನ್ನು ಗುರುತಿಸಿ ಆಲಂಗಿಸಿಕೊಂಡರು. ಪರಸ್ಪರ ಪರಿಚಯುವಾಯಿತು.

ಇಂದ್ರನು ನಳಮಹಾರಾಜನ ಸಹಾಯ ಹಸ್ತವನ್ನು ಯಾಚಿಸಿದ. ನಂತರ ವಚನ ಬದ್ಧನಾದ ನಳನನ್ನು ಇಂದ್ರ ದೌತ್ಯ ಕರ್ಮಕ್ಕೆ ನೇಮಿಸಿದ. ದಮಯಂತಿಯ ಬಳಿಗೆ ಹೋಗಿ ಹೇಗಾದರೂ ಮಾಡಿ ನನ್ನನ್ನು ವರಿಸುವಂತೆ ಮನ ಒಲಿಸಬೇಕೆಂದು ತಿಳಿಸಿದ. ಒಂದು ವೇಳೆ ದಮಯಂತಿಯು ನನ್ನನ್ನು ಸ್ವೀಕರಿಸಲು ಒಪ್ಪದಿದ್ದರೆ ನನ್ನ ಮಿತ್ರರಾದ ವರುಣ, ವಾಯು, ಯಮ ಇವರಲ್ಲಿ ಯಾರೊಬ್ಬರನ್ನಾದರೂ ವರಿಸುವಂತೆ ಮಾಡಬೇಕೆಂದು ಆದೇಶ ವಿತ್ತು ಅಂತಃಪುರವನ್ನು ಪ್ರವೇಶಿಸುವಲ್ಲಿ ಯಾವ ಅಡ್ಡಿ ಆತಂಕವೂ ಬಾರ ದಿರುವಂತೆ ವರವಿತ್ತು ಬೀಳ್ಕೊಟ್ಟ.

ನಳ ದಮಯಂತಿಯನ್ನು ಅತಿಶಯವಾಗಿ ಪ್ರೀತಿಸುತ್ತಿದ್ದ. ಅವಳನ್ನು ಮದುವೆಯಾಗಲೆಂದೇ ಸ್ವಯಂವರಕ್ಕೆ ಹೊರಟಿದ್ದ. ಹಂಸಗಳಿಂದ ದಮ ಯಂತಿಯೂ ಸಹ ತನ್ನಲ್ಲಿ ಅನುರಕ್ತಳಾಗಿರುವುದನ್ನು ಕೇಳಿಯೂ ಇದ್ದ. ಈಗ ಅವಳನ್ನು ಸಂದರ್ಶಿಸಿ 'ನೀನು ಬೇರೊಬ್ಬ ಪುರುಷನನ್ನು ಮದುವೆ ಯಾಗು' ಎಂದು ಅವನ ದೂತನಾಗಿ ಹೋಗುವುದಾದರೂ ಹೇಗೆ ? ಅವಳು ಏನೆಂದುಕೊಳ್ಳಲಿಕ್ಕಿಲ್ಲ ? ಹೀಗೆಂದು ಯೋಚಿಸಿದರೂ ವಚನಬದ್ಧನಾಗಿದ್ದ. ಕೊಟ್ಟ ಮಾತಿಗೆ ಕಟ್ಟು ಬಿದ್ದು ಹೊರಟ. ಅವಳೇನಾದರು ಇಂದ್ರಾದಿ ಗಳಲ್ಲಿ ಯಾರೊಬ್ಬನನ್ನು ವರಿಸಲು ಮನಸ್ಸು ಮಾಡಿದರೆ ಒಳ್ಳೆಯದೇ ಆಯಿತು. ಅವರೆಲ್ಲ ದೇವತೆಗಳು. ಇದು ದಮಯಂತಿಯ ಉತ್ಕರ್ಷ ವಲ್ಲವೆ ? ಎಂದು ವಿಚಾರ ಮಾಡಿ ಮನಸ್ಸಿಗೆ ಸಮಾಧಾನ ತಂದುಕೊಂಡ. ತನ್ನ ಪ್ರೇಯಸಿಯ ಉತ್ಕರ್ಷದ ಕಲ್ಪನೆಯಲ್ಲಿ ಪುಳಕಿತನಾದ.

ದೇವತೆಗಳ ವರಬಲವಿದ್ದ ಕಾರಣ ದಮಯಂತಿಯ ಅಂತಃಪುರವನ್ನು ಸೇರಲು ಅವನಿಗೆ ಏನೂ ತೊಂದರೆಯಾಗಲಿಲ್ಲ.

ಆಗ ತಾನೇ ದೂತಿಯಾಗಿ ಬಂದಿದ್ದ ಉರ್ವಶೀ ಇಂದ್ರನ ಪ್ರಣಯ ಕಾಮನೆಯನ್ನು ಅರುಹಿ, ದಿವ್ಯ ವಸ್ತ್ರಾಭರಣಗಳ ಉಡುಗೊರೆಯಿತ್ತು ಹೊರಟಿದ್ದಳು. ದಮಯಂತಿಯ ಉತ್ತರದಿಂದ ಅವಳು ಖಿನ್ನಳಾಗಿದ್ದಳು.

ಅಷ್ಟು ಹೊತ್ತಿಗೆ ಸರಿಯಾಗಿ ನಳನೇ ಅಂತಃಪುರದಲ್ಲಿ ದಮಯಂತಿಯ ಎದುರಿನಲ್ಲಿ ನಿಂತಿದ್ದ. ಅವನಾರೆಂದು ತಿಳಿಯದಿದ್ದರೂ ದಮಯಂತಿಗೆ ಆತನ ಸೌಂದರ್ಯ ಗಾಂಭೀರ್ಯಾದಿಗಳನ್ನು ಕಂಡು ಕುತೂಹಲವಾಯಿತು. ಇವನು ಇಲ್ಲಿಗೆ ಬಂದುದಾದರೂ ಹೇಗೆಂದು ಆಶ್ಚರ್ಯವಾಯಿತು. ಇವನೇನು ಮನ್ಮಥನೆ ? ನಳನೆ ? ನಲಕೂಬರನೆ ? ಅವನನ್ನೇ ಕೇಳಿಬಿಡುವೆನೆಂದು ನಿರ್ಧರಿಸಿದಳು. ಕುಳಿತುಕೊಳ್ಳಲು ಸಿಂಹಾಸನವನ್ನಿತ್ತಳು. ಸಮಯೋಚಿತವಾಗಿ ನೀಡಿದ ಅತಿಥಿ ಸತ್ಕಾರದಿಂದ ನಳ ಮಹಾರಾಜ ಸಂತುಷ್ಟನಾಗಿದ್ದ. ಆಗ "ತಾವು ಯಾರು ? ಬಂದ ಕಾರ್ಯವೇನು ? ಈ ಅಂತಃಪುರದಲ್ಲಿ ಗಂಡಸರೇನು ಗಂಡು ನೊಣವೂ ಸಹ ನುಸುಳಿ ಬರುವಂತಿಲ್ಲವಲ್ಲ !" ಎಂದು ಅಚ್ಚರಿಯನ್ನು ವ್ಯಕ್ತಪಡಿಸುತ್ತಾ ಪ್ರಶ್ನಿಸಿದಳು.

ನಳ ಹೇಳಿದ — "ನಾನು ಅಮರೇಂದ್ರನ ದೂತ. ನಿನ್ನ ಲೋಕೋತ್ತರ ಸೌಂದರ್ಯವನ್ನು ನಾರದರಿಂದ ಕೇಳಿ ನಿನ್ನಲ್ಲಿ ದೇವೇಂದ್ರ ಅನುರಕ್ತನಾಗಿದ್ದಾನೆ. ನಿನ್ನ ವಿರಹದಲ್ಲಿ ಪೀಡಿತನಾಗಿದ್ದಾನೆ."

ಈ ಮಾತನ್ನು ಮುಂದುವರಿಸಲು ದಮಯಂತಿಗೆ ಇಷ್ಟವಾಗಲಿಲ್ಲ. ಮುಖವನ್ನು ತಿರುಗಿಸಿ ತನ್ನ ಅಸಮಾಧಾನವನ್ನು ಸೂಚಿಸಿದಳು. ವಿವಶ

ಳಾಗಿ ಉತ್ತರಿಸಿದಳು — "ಶಚೀಪತಿಯ ಪ್ರಣಯ ಯಾಚನೆಯ ಮಾತು ಸಾಕು ಮಾಡಿ. ನಾನು ಈ ಜನ್ಮದಲ್ಲಿ ನಳಚಕ್ರವರ್ತಿಯನ್ನಲ್ಲದೆ ಬೇರೊಬ್ಬ ಪುರುಷನನ್ನು ವರಿಸುವುದಿಲ್ಲ ಒಂದು ವೇಳೆ ನಳಸಾರ್ವಭೌಮನೊಂದಿಗೆ ವಿವಾಹಿತಳಾಗುವ ಸೌಭಾಗ್ಯ ನನಗಿಲ್ಲವಾದರೆ ನಾನು ಕುಮಾರಿಯಾಗಿ ಇರುವೆನೇ ಹೊರತು ಬೇರೊಬ್ಬನನ್ನು ಮದುವೆಯಾಗುವುದಿಲ್ಲ" ಎಂದಳು. ಮುಂದುವರಿದು "ನೀವಾರು ? ದೇವತೆಯೆ ? ನಿಮ್ಮ ಹೆಸರೇನು ?" ಎಂದು ಪ್ರಶ್ನಿಸಿದಳು.

"ನೋಡು, ಈಗ ನಾನು ದೂತನಾಗಿ ಬಂದಿದ್ದೇನೆ. ದೂತನ ಕುಲ ಗೋತ್ರದ ಚರ್ಚೆ ವ್ಯರ್ಥ. ನೀನೀಗ ಮೂರು ಲೋಕದ ಸ್ವಾಮಿಯಾದ ಸುರರೊಡೆಯನ ಮನದನ್ನೆಯಾಗಿರುವಿ. ಇದು ಯಾವ ಹೆಣ್ಣಿಗಾದರೂ ಹೆಮ್ಮೆಯ ವಿಷಯ. ಆ ಅಮರೇಂದ್ರನೆಲ್ಲಿ ? ಈ ನರಹುಳು ನಳನೆಲ್ಲಿ ? ಪುರುಹೂತನಿಗೆ ವರಮಾಲೆಯನ್ನು ತೊಡಿಸಿ, ಸ್ವರ್ಗದ ಸಿರಿಸಂಪತ್ತಿನ ರಾಣಿಯಾಗುವುದೇ ಉಚಿತ. ಬಂದ ಭಾಗ್ಯವನ್ನು ತಿರಸ್ಕರಿಸಬೇಡ" ಎಂದು ಉತ್ತರಿಸಿದನು.

ದಮಯಂತಿಗೆ ಈ ವಿಷಯದಲ್ಲಿ ಮಾತು ಕೇಳಲು ಇಷ್ಟವಿರಲಿಲ್ಲ. ತನ್ನ ಅಸಮಾಧಾನವನ್ನು ಸೂಚಿಸಲು ಎದ್ದು ನಿಂತಳು. ಗಂಭೀರ ದನಿಯಲ್ಲಿ ಹೇಳಿದಳು :-

"ನಾನು ನಿಷಧಾಧಿಪನನ್ನು ತನ್ನ ಪತಿ ಎಂಬುದಾಗಿ ಮನಸಾ ವರಿಸಿಬಿಟ್ಟಿದ್ದೇನೆ. ಇನ್ನು ಸುರಾಧಿಪನ ಮಾತೇಕೆ ? ಒಂದು ವೇಳೆ ನಳಚಕ್ರವರ್ತಿಯು ನನ್ನನ್ನು ತಿರಸ್ಕರಿಸಿದರೆ ನಾನು ಮದುವೆ ಇಲ್ಲದೆ ಇದ್ದೇನು. ಅನ್ಯ ಪುರುಷನು ಅಮರನಾಗಲೀ ಅಮರೇಂದ್ರನೇ ಆಗಲಿ ನನ್ನನ್ನು ಮದುವೆಯಾಗಲಾರನೆಂಬುದು ಖಚಿತ. ಇನ್ನು ಈ ಮಾತು ಸಾಕು" ಎಂದಳು.

ಅವಳ ಪ್ರೀತಿ ನಿಷ್ಠೆಯಿಂದ ನಳ ಸಂತುಷ್ಟನಾದ. ಹರ್ಷೋನ್ಮಾದದಲ್ಲಿ ತನ್ನ ಯಥಾರ್ಥ ಪರಿಚಯವನ್ನು ಮಾಡಿಕೊಂಡ. ದಮಯಂತಿಗೂ ಆನಂದವಾಯಿತು. ಇಬ್ಬರೂ ಹರ್ಷೋಲ್ಲಾಸದಲ್ಲಿ ಪರಸ್ಪರ ಬೀಳ್ಕೊಂಡರು

ದಮಯಂತಿಯು ಅಂತಃಪುರದಿಂದ ಹೊರಹೊರಟು ನೇರವಾಗಿ ಇಂದ್ರನಿದ್ದೆಡೆಗೆ ನಳ ಬಂದು ಏನನ್ನೂ ಮರೆಮಾಚದೆ ದಮಯಂತಿಗೂ ತನಗೂ ಆದ ಮಾತುಕತೆಯನ್ನು ಅರುಹಿದ.

ನಳಭೂಪನ ಸರಳಸ್ವಭಾವ ಹಾಗೂ ಸೌಜನ್ಯಾದಿ ಸದ್ಗುಣಗಳಿಂದ ಸಂತುಷ್ಟನಾದ ದೇವೇಂದ್ರ ಅವನನ್ನು ಸನ್ಮಾನಿಸಿ ಬೀಳ್ಕೊಟ್ಟ.

ಇತ್ತ ನಾಲ್ಕೂ ಜನ ದೇವತೆಗಳು ನಳನಂತೆ ರೂಪ ಕೈಗೊಂಡವರಾಗಿ ಸ್ವಯಂವರ ಮಂಟಪದಲ್ಲಿ ಬಂದು ಕುಳಿತರು. 'ಹೇಗೂ ಅವಳು ನಳನನ್ನು ಪತಿಯಾಗಿ ವರಿಸಿದ್ದಾಗಿದೆ! ನೋಡೋಣ. ನಿಜವಾದ ನಳ ಅವಳ ಕಣ್ಣಿಗೆ ಬೀಳದಂತೆ ಮಾಡಿಬಿಡೋಣ' ಎಂದು ತಮ್ಮ ಮಾಯೆಯಿಂದ ನಳನು ಗೋಚರಿಸದಂತೆ ಮಾಡಿಬಿಟ್ಟರು!

ಸ್ವಯಂವರ ಮಂಟಪದಲ್ಲಿ ಶುಭ ಮುಹೂರ್ತಕ್ಕೆ ಸರಿಯಾಗಿ ದಮಯಂತಿ ಪ್ರವೇಶಿಸಿದಳು. ನಾಲ್ವರು ನಳರನ್ನು ಕಂಡು ಆಶ್ಚರ್ಯಚಕಿತಳಾದಳು. ಏನು ಮಾಡಬೇಕೆಂದು ತೋಚದೆ ಚಿಂತಾಕ್ರಾಂತಳಾದಳು ಯಾರ ಕೊರಳಿಗೂ ವರಮಾಲೆಯನ್ನು ಹಾಕದೆ ಮಂಟಪದಿಂದ ಹೊರ ಹೊರಟಳು.

ಜಾಣೆಯಾದ ವಿದರ್ಭರಾಜಕುವರಿ ಸರಸ್ವತಿಯನ್ನು ಧ್ಯಾನ ಮಾಡಿ ತನಗೆ ವಿವೇಕವನ್ನು ಕರುಣಿಸಬೇಕೆಂದೂ ನಿಜವಾದ ನಳನನ್ನು ವರಿಸಲು ಸನ್ಮತಿಯನ್ನು ಕರುಣಿಸೆಂದೂ ಯಾಚಿಸಿದಳು.

ಪ್ರಸನ್ನಳಾದ ಸರಸ್ವತಿಯ ಅನುಗ್ರಹದಿಂದ ನಳವೇಷಧಾರಿಗಳಾಗಿ ಮಂಟಪದಲ್ಲಿ ಕುಳಿತಿರುವವರು ಇಂದ್ರ, ವರುಣ, ಯಮ ಮತ್ತು ವಾಯು ಎಂದು ತಿಳಿದಳು. ಮತ್ತು ದೇವೇಂದ್ರನನ್ನು ಸ್ತುತಿಸಿದರೆ ಅವನ ವರ ಪ್ರಸಾದದಿಂದ ತನ್ನ ಅಭೀಷ್ಟವು ಸಿದ್ಧಿಸುವುದೆಂಬುದನ್ನೂ ಅರಿತಳು.

ಆಗ ಮತ್ತೊಮ್ಮೆ ಮಂಟಪಕ್ಕೆ ಪ್ರವೇಶಿಸಿದಳು. ದೇವೇಂದ್ರನನ್ನು ಸ್ತುತಿಸಿದಳು. ತನ್ನ ಅಂತರಂಗದ ಬಯಕೆಯನ್ನು ಅರುಹಿದಳು. ಅವನ ಅನುಗ್ರಹ ಭಿಕ್ಷೆಯನ್ನು ಬೇಡಿದಳು. ನಳನನ್ನು ತೋರಿಸಲು ಪ್ರಾರ್ಥಿಸಿ ಕೊಂಡಳು.

ಅವಳ ಈ ಸ್ತುತಿಯಿಂದ ದೇವೇಂದ್ರ ಪ್ರಸನ್ನನಾದ. ದೇವತೆಗಳು ಸಂತೋಷಗೊಂಡರು. ನಳಮಹಾರಾಜನು ಕಾಣಿಸುವಂತೆ ಅನುಗ್ರಹಿಸಿ ದರು. ದಮಯಂತಿಯು ನಳಮಹಾರಾಜನ ಕೊರಳಿಗೆ ವರಮಾಲೆಯನ್ನು ಹಾಕಿದಳು. ಆ ನೈಜ ಪ್ರೇಮಿಗಳನ್ನು ಹರಸಿ ದೇವತೆಗಳು ಅಂತರ್ಧಾನ ರಾದರು.

ನಳದಮಯಂತಿಯರ ಇಷ್ಟಾರ್ಥ ಸಿದ್ಧಿಸಿತು. ದೇವತೆಗಳು ಸ್ವರ್ಗ ದತ್ತ ತೆರಳಿದರು. ದಾರಿಯಲ್ಲಿ ಕಾಲಪುರುಷ ಅವರನ್ನು ಕಂಡ. ಆ ಅಸಫಲ ಪ್ರೇಮಿಗಳಿಗೆ ಹೇಳಿದ – 'ಈಗ ನನ್ನ ಪೌರುಷವನ್ನು ನೋಡಿ. ಆ ದಂಪತಿ ಗಳನ್ನು ಸತಾಯಿಸಿ ಸತಾಯಿಸಿ ಕಂಗಾಲಾಗುವಂತೆ ಮಾಡಿಬಿಡುವೆ. ಹೆಚ್ಚೇಕೆ, ದಮಯಂತಿಯು ನಿಮ್ಮನ್ನು ವಿವಾಹವಾಗಲು ಹಾತೊರೆಯು ವಂತೆ ಮಾಡಿಬಿಡುವೆ. ಮುಂದೆ ನಿಮಗೆ ಬಿಟ್ಟದ್ದು, ಎಂದು.

ಅದಕ್ಕೆ ಇಂದ್ರ ಹೇಳಿದ – "ಬೇಡ. ಇದು ಪಾಪ ! ಯೋಗ್ಯವಲ್ಲ. ಮೇಲಾಗಿ ನಾವು ಅವರಿಬ್ಬರನ್ನೂ ಹರಸಿದ್ದೇವೆ. ಹಿಮಾಂಶು ವಂಶ

ಸಂಭೂತನಾದ ನಳನು ಪ್ರಾತಃಸ್ಮರಣೀಯರಲ್ಲಿ ಮೊದಲಿಗನಾಗಿರಲೆಂದು ಅನುಗ್ರಹಿಸಿದ್ದೇವೆ."

'ನೀವು ಅನುಗ್ರಹಿಸಿದರೇನಾಯಿತು. ನನ್ನ ಪರಾಕ್ರಮವನ್ನು ನೋಡಿ' ಎಂದು ಹೇಳುತ್ತಾ ಅಲ್ಲಿಂದ ಕಲಿ ಪುಷ್ಕರನ ಬಳಿಗೆ ಬಂದ. ನಳನೊಡನೆ ಕಪಟದ್ಯೂತವಾಡಲು ಪುಸಲಾಯಿಸಿದ. ನಳನನ್ನು ಗೆದ್ದು ರಾಜ್ಯ-ಕೋಶ ಎಲ್ಲವನ್ನೂ ಗೆದ್ದುಕೊಳ್ಳುವಂತೆ ಹುರಿದುಂಬಿಸಿದ. ತಾನು ಎಲ್ಲವನ್ನು ಗೆದ್ದುಕೊಡುವುದಾಗಿ ಆಮಿಷ ಒಡ್ಡಿದ. ಕೊನೆಗೂ ಅವರಿಬ್ಬರೂ ದ್ಯೂತ ವಾಡುವಂತೆ ಮಾಡಿಯೇ ಬಿಟ್ಟ. ಆ ಆಟದಲ್ಲಿ ಸರ್ವಸ್ವವನ್ನೂ ಕಳೆದು ಕೊಂಡು, ಸಕಲ ಸಿರಿಸಂಪದವನ್ನೂ ರಾಜ್ಯವನ್ನೂ ಪುಷ್ಕರನಿಗೊಪ್ಪಿಸಿ, ನಳನು ವನಕ್ಕೆ ತೆರಳುವಂತೆ ಮಾಡಿಯೇ ಬಿಟ್ಟ.

ಶೌಚಾಚಾರ ಸಂಪನ್ನನೂ ಶುದ್ಧಾಂತಃಕರಣನೂ ಆದ ನಳ ಕಲಿಯ ಪ್ರಭಾವಕ್ಕೆ ಹೇಗೆ ಒಳಗಾದ ? ಅವನಲ್ಲಿ ಕಲಿ ಪ್ರವೇಶಿಸಿದ್ದು ಹೇಗೆ ? ಎಂಬ ಜಿಜ್ಞಾಸೆ ಸಹಜವಾದುದೇ. ಎಷ್ಟೋ ದಿನ ಪ್ರಯತ್ನ ಪಟ್ಟರೂ ನಳನಲ್ಲಿ ಪ್ರವೇಶ ಮಾಡಲು ಕಲಿಪುರುಷನಿಗೆ ಸಾಧ್ಯವಾಗಿರಲಿಲ್ಲ. ಅವನು ಹೊಂಚು ಹಾಕಿ ಕಾದು ಕುಳಿತಿದ್ದ. ವರ್ಷಗಳುರುಳಿದರೂ ಹತಾಶನಾಗಲಿಲ್ಲ. ಒಂದು ದಿನ ಅವನಿಗೆ ಕಿಂಚಿತ್ ಅವಕಾಶ ಸಿಕ್ಕಿತು ! ಅಂದು ಮೂತ್ರವಿಸರ್ಜನೆ ಮಾಡಿ ಕಾಲ್ತೊಳೆದುಕೊಂಡು ಶುದ್ಧಾಚಮನ ವನ್ನು ಮಾಡುವಾಗ ನಳನಿಂದ ಕಿಂಚಿತ್ ಪ್ರಮಾದವಾಯಿತು. ಕಲಿ ಅಷ್ಟೇ ಸಾಕೆಂದು ಅವನಲ್ಲಿ ಪ್ರವೇಶಿಸಿಬಿಟ್ಟ. ಅವನನ್ನು ಸತಾಯಿಸತೊಡಗಿದ.

ಕಲಿ ಪ್ರಭಾವದಿಂದ ಮೊದಲು ಆಟಕ್ಕೆ ಒಪ್ಪಿದ. ಪಣವಿಟ್ಟು ತನ್ನ ಸರ್ವಸ್ವವನ್ನೂ ಕಳೆದುಕೊಂಡು ಕಾಡು ಮೇಡಿನತ್ತ ಹೊರಡಬೇಕಾಯಿತು.

ಹೊರಟ. ಪ್ರಾತಃಸ್ಮರಣೀಯರಾದ ಪತಿವ್ರತೆಯರಲ್ಲಿ ಒಬ್ಬಳಾದ ದಮಯಂತಿ ಅವನನ್ನು ಹಿಂಬಾಲಿಸಿದಳು. ಅಷ್ಟು ಹೊತ್ತಿಗೆ ಅವರಿಗೆ ಇಬ್ಬರು ಮಕ್ಕಳಾಗಿದ್ದರು. ಅವರನ್ನು ಅಜ್ಜನ ಮನೆಗೆ ಕಳಿಸಿಕೊಟ್ಟರು.

ಕಾಡುಮೇಡುಗಳಲ್ಲಿನ ಜೀವನದಿಂದ ದಮಯಂತಿ ಸೊರಗಿ ಹೋದಳು. ಆದರೂ ಹರ್ಷಚಿತ್ತಳಾಗಿದ್ದು ತನ್ನ ಪತಿಯ ಪ್ರಸನ್ನತೆಗಾಗಿ, ಅವನ ಸುಖಕ್ಕಾಗಿ ಪ್ರಯತ್ನಿಸುತ್ತಿದ್ದಳು. ಒಮ್ಮೆಯಾದರೂ ತನ್ನ ಬಳಲಿಕೆಯನ್ನಾಗಲೀ ಬೇಸರವನ್ನಾಗಲೀ ಹೇಳಿಕೊಳ್ಳುತ್ತಿರಲಿಲ್ಲ.

ಒಂದು ದಿನ ಬೇಟೆಗಾಗಿ ಹೊರಟ ನಳನ ಉಟ್ಟ ಬಟ್ಟೆಯನ್ನು ಹಾರಿಸಿಕೊಂಡು ಪಕ್ಷಿಗಳು ಆಕಾಶದಲ್ಲಿ ಕಣ್ಮರೆಯಾಗಿ ಬಿಟ್ಟವು. ಬೆತ್ತಲೆ ಇರುವ ಮಹಾರಾಜನಿಗೆ ಮರ್ಯಾದೆ ಉಳಿಸಿಕೊಳ್ಳಲು ದಮಯಂತಿ ಉಟ್ಟ ಸೀರೆಯನ್ನು ತುಂಡರಿಸಿಕೊಡಬೇಕಾಗಿ ಬಂದಿತು ಆ ರಾತ್ರಿ ನಳನಿಗೆ ನಿದ್ರೆಯೇ ಬರಲಿಲ್ಲ. ತಾನು ಕಣ್ಮರೆಯಾಗದ ಹೊರತು ಎಷ್ಟು ಹೇಳಿದರೂ ಈಕೆ ತೌರು ಮನೆಗೆ ಹೋಗಿ ಮಕ್ಕಳೊಂದಿಗೆ ಸುಖವಾಗಿರಲು ಒಪ್ಪುವುದಿಲ್ಲವಲ್ಲ. ಈಗ ಮಲಗಿ ನಿದ್ರಿಸುತ್ತಿರುವಾಗ ನಾನು ಕಣ್ಮರೆಯಾಗಿ ಹೊರಟು ಹೋಗುವುದೊಂದೇ ಉಪಾಯ ಎಂದು ಬಗೆದ. ಅವಳನ್ನು ಬಿಟ್ಟು ಹೊರಟೇ ಬಿಟ್ಟ. ಅಸಹಾಯಕಳಾದ ದಮಯಂತಿ ವಿವಶಳಾಗಿ ತೌರುಮನೆ ಸೇರುವಳೆಂದು ನಿರ್ಧರಿಸಿದ್ದ.



ಅವನ ನಿರ್ಧಾರ ಸರಿಹೋಯಿತು. ಎಚ್ಚರವಾದೊಡನೆ ನಳನಿಗಾಗಿ ಹುಡುಕಿದಳು. ಕಾಡು ಮೇಡುಗಳಲ್ಲಿ ಹುಚ್ಚಿಯಂತೆ ಅಲೆದಳು. ಕಲಿಪುರುಷ ಅವಳನ್ನು ಕಂಗಾಲಾಗಿ ಮಾಡಬೇಕೆಂದು ಎಷ್ಟು ಪ್ರಯತ್ನಿಸಿದರೂ ಆ ಸತೀ ಸಾಧ್ವಿಯನ್ನು ಮುಟ್ಟಲು ಸಾಧ್ಯವಾಗಲಿಲ್ಲ. ಅವಳಿಗೆ ವ್ಯಾಪಾರಿ

ಗಳ ತಂಡವೊಂದು ಕಾಣಿಸಿತು. ಅವರಿಗೆ ತಾನು ಯಾರೆಂಬುದನ್ನು ತಿಳಿಸಿ ಅವರೊಡನೆ ಚೇದಿ ನಗರಕ್ಕೆ ಬಂದು ಸೇರಿದಳು. ಅಷ್ಟರೊಳಗೆ ಕಲಿಪುರುಷ ಒಮ್ಮೆ ಸರ್ಪನಾಗಿ ಬಂದು ನುಂಗಲು ಯತ್ನಿಸಿದ್ದ. ಇನ್ನೊಮ್ಮೆ ಕಾಡು ಆನೆಗಳ ರೂಪದಲ್ಲಿ ಧಾಳಿ ಇಟ್ಟಿದ್ದ. ಸದಾ ಭಗವತ್‌ಸ್ಮರಣೆಯಲ್ಲಿ ನಿರತ ಳಾದ ಆ ಸಾಧ್ವೀ ಮಣಿಯು ಈ ಕುತ್ತುಗಳಿಂದ ಪಾರಾದಳು. ದೈವವನ್ನು ನೆನೆವವರಿಗೆ ಭಯವುಂಟೆ ?

ದಮಯಂತಿ ಚೇದಿರಾಜನ ಅಂತಃಪುರದಲ್ಲಿ ಸೈರಂಧ್ರಿಯಾಗಿ ಸೇರಿ ಕೊಂಡಳು. ಅವಳಿಗೆ ಚೇದಿ ಮಹಾರಾಣಿ ಯಾರೆಂದು ಗೊತ್ತಿತು. ತನ್ನ ಚಿಕ್ಕಮ್ಮನೆಂದು ತಿಳಿದಿದ್ದರೂ ಈ ದೀನ ಹೀನ ಸ್ಥಿತಿಯಲ್ಲಿರುವಾಗ ತನ್ನ ಪರಿಚಯವನ್ನು ಮರೆಮಾಚಿಡುವುದೇ ಉಚಿತವೆಂದು ಭಾವಿಸಿದ್ದಳು.

ಇತ್ತ ನಳನನ್ನು ಕಲಿ ತುಂಬ ಸತಾಯಿಸಿದ. ಅದರಿಂದಾಗಿ ದೈಹಿಕ ಹಾಗೂ ಮಾನಸಿಕ ಯಾತನೆಯಿಂದ ಹುಚ್ಚನಂತಾಗಿಬಿಟ್ಟಿದ್ದ. ಆದರೂ ಕರ್ತವ್ಯಪ್ರಜ್ಞೆ ಅವನಿಗಿತ್ತು. ಒಮ್ಮೆ ಸುತ್ತಲೂ ಕಾಡ್ಗಿಚ್ಚು ಹಬ್ಬಿ ಹರಡಿತು ಅದರಲ್ಲೊಂದು ಕರ್ಕೋಟಕ ನಾಗ ಸಿಕ್ಕಿಬಿದ್ದಿತ್ತು. ಅದು ನಳ ಮಹಾ ರಾಜನನ್ನು ಗುರುತಿಸಿ 'ನರೇಂದ್ರ ನನ್ನನ್ನು ರಕ್ಷಿಸು ರಕ್ಷಿಸು !' ಎಂದು ಅಂಗಲಾಚಿ ಬೇಡಿಕೊಂಡಿತು. ತನ್ನ ಮೇಲಿನ ಹಂಗು ತೊರೆದು ಆ ದಾವಾ ಗ್ನಿಯ ದಳ್ಳುರಿಯಲ್ಲಿ ನುಗ್ಗಿ ಹೋಗಿ ಆ ಕರ್ಕೋಟಕನನ್ನು ಜೀವಸಹಿತ ಹಿಡಿದು ತಂದು ರಕ್ಷಿಸಿದ. ಆದರೆ ಆ ನಾಗ ನಳನನ್ನು ಕಚ್ಚಿಬಿಟ್ಟ. ಅತನ ವಿಷ ನಳನ ದೇಹದಲ್ಲೆಲ್ಲ ವ್ಯಾಪಿಸಿತು. ಮನ್ಮಥನಂತಿದ್ದ ಭೂಪಾಲ ಮರ್ಕಟ ಪ್ರಾಯನಾದ. ಅಡ್ಡಮೋರೆ. ಗಂಟು ದೇಹ. ಗುಜ್ಜುಗೊರಲು. ಅಯ್ಯೋ ಕ್ರೂರ ಜಂತುಗಳೊಡನೆ ಸಖ್ಯ ಬೆಳೆಸಿದ್ದಕ್ಕೆ ಈ ದುರ್ಗತಿ ಬಂತೆಂದು ಪಶ್ಚಾತ್ತಾಪ ಪಟ್ಟ.

ಆಗ ಕರ್ಕೋಟಕ ಹೇಳಿದ :– 'ಮಹಾರಾಜ ! ನಾನು ನಿನಗೆ ಉಪ ಕಾರಮಾಡಲೆಂದೇ ಕಚ್ಚಿದ್ದು. ಈ ವೇಷದಲ್ಲಿ ಸಾಮಾನ್ಯವಾಗಿ ಯಾರೂ ನಿನ್ನನ್ನು ಗುರುತಿಸಲಾರರು. ನೀನು ಈಗ ಋತುಪರ್ಣ ಮಹಾರಾಜನ ಆಸ್ಥಾನಕ್ಕೆ ಹೋಗು. ಬಾಹುಕ ಎಂಬ ಹೆಸರಿಟ್ಟುಕೋ. ಆತನ ಸಾರಥಿ ಯಾಗಿದ್ದು ಸಮಯ ಬಂದಾಗ ಆತನಿಂದ ಅಕ್ಷ ಹೃದಯವನ್ನು ಕಲಿ. ಅವನಿಗೆ ನಿನ್ನ ನೆಚ್ಚಿನ ವಿದ್ಯೆಯಾದ ಅಶ್ವ ಹೃದಯವನ್ನು ಕಲಿಸು. ನೀನು ಆ ನಿನ್ನ ವಸ್ತ್ರವನ್ನು ಅಪಹರಿಸಿದ ಪಕ್ಷಿಗಳನ್ನು ಸ್ಮರಿಸಿಕೊಂಡಾಗ ಅವು ನಿನ್ನ ವಸ್ತ್ರ ವನ್ನು ನಿನಗೆ ತಂದು ಕೊಡುವವು. ಅದನ್ನು ಧರಿಸಿದೊಡನೆಯೇ ನಿನ್ನ ರೂಪು ನಿನಗೆ ದೊರೆಯುವುದು. ನನ್ನ ವಿಷದ ಪ್ರಭಾವ ಅಳಿಯುವುದು. ನಿನಗೆ ಮಂಗಳವಾಗುವುದು. ಚಿಂತಿಸಬೇಡ" ಎಂದು.

ನಳನು ಅದರಂತೆ ಮಾಡಿ ಋತುಪರ್ಣನ ಕೈಂಕರ್ಯದಲ್ಲಿ ಸೇರಿ ಕೊಂಡನು.

ವಿದರ್ಭಾಧಿಪತಿಯಾದ ಭೀಮ ಭೂಪಾಲನಿಗೆ ತನ್ನ ಮಗಳು ಮತ್ತು ಅಳಿಯನಿಗೆ ಬಂದೊದಗಿದ ಕಷ್ಟಕೋಟಲೆಗಳ ಸುದ್ದಿ ತಲುಪಿತು. ನಳದಮ ಯಂತಿಯರನ್ನು ಹುಡುಕಿಸಲು ಸಕಲ ಪ್ರಯತ್ನವನ್ನೂ ಮಾಡತೊಡಗಿದ. ದೂತರು ಚೇದಿರಾಜನ ಅಂತಃಪುರದಲ್ಲಿ ಸೈರೇಂಧ್ರಿಯಾಗಿರುವ ದಮಯಂತಿ ಯನ್ನು ಪತ್ತೆಹಚ್ಚಿ ತಿಳಿಸಿದರು. ಮಹಾರಾಜನು ತನ್ನ ಮಗಳನ್ನು ಅರ ಮನೆಗೆ ಬರಮಾಡಿಕೊಂಡ.

ತನ್ನ ತೌರಿಗೆ ಬಂದು ಸೇರಿದೊಡನೆಯೇ ದಮಯಂತಿ ತನ್ನ ಪತಿ ಯನ್ನು ಪತ್ತೆ ಮಾಡಲು ಕೆಲವು ಪ್ರಶ್ನೆಗಳನ್ನು ರಾಜಮಹಾರಾಜರ ಸಭೆ ಗಳಲ್ಲಿ ಹೋಗಿ ಕೇಳಬೇಕೆಂದೂ ಯಾರಾದರೂ ಅವುಗಳಿಗೆ ಸಮುಚಿತ ಉತ್ತರ

ವನ್ನಿತ್ತರೆ ಕೂಡಲೇ ಆ ವ್ಯಕ್ತಿಯ ಪರಿಚಯವನ್ನು ಪಡೆದು ಬರಬೇಕೆಂದೂ ಪ್ರಾರ್ಥಿಸಿಕೊಂಡು, ಬ್ರಾಹ್ಮಣರನ್ನು ದೇಶವಿದೇಶಗಳಿಗೆ ಕಳಿಸಿಕೊಟ್ಟಳು. ನಳನಲ್ಲದೆ ಬೇರೆ ಯಾರೂ ಆ ಪ್ರಶ್ನೆಗಳಿಗೆ ಉತ್ತರಿಸಲಾರರೆಂದು ಆಕೆಯ ನಂಬಿಕೆಯಾಗಿತ್ತು.

ಬ್ರಾಹ್ಮಣರು ಹಿಂತಿರುಗಿ ಬಂದವರು ಋತುಪರ್ಣ ಮಹಾರಾಜನ ಸಭೆಯಲ್ಲಿರುವ ಬಾಹುಕನೆಂಬುವನು ಕೊಟ್ಟ ಉತ್ತರವನ್ನು ದಮಯಂತಿಗೆ ತಿಳಿಸಿದರು. ಜೊತೆಯಲ್ಲಿ ಅವನು ಮಹಾ ಕುರೂಪಿ ಎಂದು ಅರುಹಿದರು.

'ನಳನಲ್ಲದೆ ಬೇರೆ ಯಾರೂ ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಡಲಾರರು. ಆದರೆ ಈಗ ಉತ್ತರ ಕೊಟ್ಟಿರುವ ವ್ಯಕ್ತಿ ಕುರೂಪಿ. ಅವನು ನಳನಾಗಿರಲು ಸಾಧ್ಯವೆ ?' ಹೀಗೆಂದು ದಮಯಂತಿ ಚಿಂತಾಕ್ರಾಂತಳಾದಳು. ಕೊನೆಗೆ ಒಮ್ಮೆ ಪರೀಕ್ಷಿಸಿ ನೋಡಿ ಬಿಡೋಣವೆಂದು ನಿರ್ಧರಿಸಿದಳು. 'ಎರಡನೆಯ ಬಾರಿ ದಮಯಂತಿಯ ಸ್ವಯಂವರ ನಡೆಯಲಿದೆ' ಎಂಬ ಸಂದೇಶವನ್ನು ಋತುಪರ್ಣನಿಗೆ ತಲುಪಿಸುವಂತೆ ಮತ್ತೆ ಬ್ರಾಹ್ಮಣರನ್ನು ಕಳಿಸಿ ಕೊಟ್ಟಳು.

ವಿದರ್ಭ ನರೇಶನ ಕರೆಗೆ ಓಗೊಟ್ಟು ಋತುಪರ್ಣನು ಸ್ವಯಂವರಕ್ಕೆ ಹೊರಡಲು ಮನಸ್ಸುಮಾಡಿದ. ಬಾಹುಕನಿಗೆ ತನ್ನ ಅಭಿಪ್ರಾಯವನ್ನು ತಿಳಿಸಿ ಬೆಳಗಾಗುವುದರೊಳಗಾಗಿ ವಿದರ್ಭವನ್ನು ತಲುಪಿಸುವಂತೆ ಆಜ್ಞಾಪಿಸಿದ.

ನಳನಿಗೆ ದಮಯಂತಿಯ ಸುದ್ದಿ ಕೇಳಿ ಬೇಸರವಾಯಿತು. ಆದರೆ ತಾನೀಗ ಸೇವಕನಾಗಿರುವೆನೆಂಬ ಪ್ರಜ್ಞೆ ಅವನಿಗಿತ್ತು. ಆದ್ದರಿಂದ ರಾಜನ ಆದೇಶದಂತೆ ರಥವನ್ನು ಹೂಡಿದ. ವಾಯುವೇಗದಲ್ಲಿ ಅಶ್ವಗಳು ದಾವು

ಗಾಲಿಟ್ಟವು. ದಾರಿಯಲ್ಲಿ ರಾಜನ ಅಪೇಕ್ಷೆಯಂತೆ ಅವನಿಗೆ ಅಶ್ವವಿದ್ಯೆಯನ್ನು ಕಲಿಸಿಕೊಟ್ಟ. ಅಂತೆಯೇ ಅವನಿಂದ ಅಕ್ಷ ಹೃದಯವನ್ನು ಕಲಿತು ಕೊಂಡ.

ರಥವು ವಿದರ್ಭನಗರಿಯನ್ನು ಸೇರಿದಾಗ ಸೂರ್ಯೋದಯವಾಗಿತ್ತು. ನಗರದಲ್ಲೆಲ್ಲೂ ಸ್ವಯಂವರದ ಸಡಗರ ಕಾಣಿಸಲಿಲ್ಲ ಭೀಮ ಭೂಪಾಲನು ಋತುಪರ್ಣನನ್ನು ಅಂತಃಕರಣ ಪೂರ್ವಕ ಸ್ವಾಗತಿಸಿ ಯಥೋಚಿತ ಆದರಾತಿಥ್ಯವನ್ನು ನೀಡಿದ.

ಇತ್ತ ದಮಯಂತಿ ತನ್ನ ಮಕ್ಕಳನ್ನು ಅಲಂಕರಿಸಿ ಆ ಕುರೂಪಿ ಬಾಹುಕನಿದ್ದೆಡೆಗೆ ಕಳಿಸಿಕೊಟ್ಟಳು. ಅವನು ನಡೆದುಕೊಂಡ ರೀತಿಯಿಂದ ಅವಳ ಸಂಶಯ ದೂರವಾಯಿತು. ಇವನೇ ನಳನೆಂಬ ನಿರ್ಧಾರಕ್ಕೆ ಬಂದಳು. ಆದರೂ ಇನ್ನೂ ಒಂದೆರಡು ರೀತಿಯಲ್ಲಿ ಪರೀಕ್ಷಿಸಿ ತನ್ನ ನಿರ್ಧಾರವು ಸರಿ ಎಂದು ಕಂಡುಕೊಂಡಳು. ಆತನ ಚರಣಗಳ ಮೇಲೆ ತಲೆಯಿಟ್ಟು ಎರಡನೆಯ ಸ್ವಯಂವರದ ಸುದ್ದಿಯನ್ನು ಹಬ್ಬಿಸಿದ್ದಕ್ಕೆ ಪಶ್ಚಾತ್ತಾಪವೆಸಗುತ್ತಾ ಕ್ಷಮೆ ಕೋರಿದಳು. ಅವನ ಈ ವೈರೂಪ್ಯದ ಕಾರಣವನ್ನು ತಿಳಿಯಲು ಕವಕಿಸಿದಳು.

ದಮಯಂತಿಯ ಪ್ರೇಮ ನಿಷ್ಠೆ ಹಾಗೂ ಚಾತುರ್ಯವನ್ನು ಮೆಚ್ಚಿ ಪುಳಕಿತನಾದ ನಳಮಹಾರಾಜ ಆ ಪಕ್ಷಿಗಳನ್ನು ಸ್ಮರಿಸಿಕೊಂಡ. ಅವು ಅವನ ಧೋತರವನ್ನು ತಂದುದರಿಸಿದವು. ಅದನ್ನು ಉಟ್ಟುಕೊಂಡೊಡನೆ ವಿಷದ ಬಾಧೆ ಅಳಿಯಿತು. ಅವನ ಸಹಜರೂಪ ವ್ಯಕ್ತವಾಯಿತು.

ಋತುಪರ್ಣ ಮಹಾರಾಜನಿಗೆ ಎಲ್ಲರಿಗಿಂತಲೂ ಹೆಚ್ಚು ಸಂತೋಷ

ವಾಯಿತು. ನಳದಮಯಂತಿಯರ ಪುನರ್ಮಿಲನದಿಂದ ಇಡೀ ರಾಜ್ಯವೇ ಆನಂದಸಾಗರದಲ್ಲಿ ಮುಳುಗಿಹೋಯಿತು.

ನಂತರ ಪುಷ್ಕರನಿಂದ ರಾಜ್ಯವನ್ನು ಪಡೆಯುವ ಪ್ರಯತ್ನ ಮಾಡಬೇಕೆಂಬ ನಿರ್ಧಾರ ಕೈಗೊಳ್ಳಲಾಯಿತು. ಮೊದಲು ಪುಷ್ಕರನ ಸೈನ್ಯವನ್ನು ನಳ ಗೆದ್ದು ಬಿಟ್ಟ. ನಂತರ ಅಕ್ಷ ಕ್ರೀಡೆಯಲ್ಲೂ ಆತನನ್ನು ಗೆದ್ದು ತನ್ನ ರಾಜ್ಯಕೋಶಗಳನ್ನು ಪಡೆದುಕೊಂಡ.

ಸಕಲ ವಿಧದಲ್ಲಿಯೂ ಪರಾಭವ ಹೊಂದಿ, ತಲೆಬಾಗಿ ನಿಂತಿದ್ದ ಪುಷ್ಕರನನ್ನು ಅತ್ಯಂತ ಉದಾರಿಯಾದ ನಳ ಚಕ್ರವರ್ತಿಯು ಸಂಬೋಧಿಸಿ – 'ಅಯ್ಯಾ ಪುಷ್ಕರ. ನೀನು ನಿರಪರಾಧಿ. ನೀನು ದ್ಯೂತಕ್ಕೆ ನನ್ನನ್ನು ಕರೆದುದು, ಅದಕ್ಕೆ ನಾನು ಒಪ್ಪಿ ಸೋತದ್ದು ಎಲ್ಲವೂ ಆ ಕಲಿಯ ಪ್ರಭಾವಕ್ಕೊಳಗಾಗಿ. ನಿನ್ನದೇನೂ ತಪ್ಪಿಲ್ಲ. ನಿನ್ನ ಬಗ್ಗೆ ನನ್ನ ಮನಸ್ಸಿನಲ್ಲಿ ಕಿಂಚಿತ್ತೂ ರೋಷವಿಲ್ಲ. ನೀನು ನಿಶ್ಚಿಂತೆಯಿಂದ ಸ್ವತಂತ್ರನಾಗಿ ಜೀವನ ನಡೆಸು' ಎಂದು ಹೇಳಿದ ಮತ್ತು ಯಥೇಚ್ಛ ಧನಕನಕಾದಿಗಳನ್ನು ಕೊಟ್ಟ. ನಳನ ಸದ್ಗುಣಗಳಿಂದ ಸರ್ವರೂ ಪ್ರಭಾವಿತರಾದರು. ಸ್ವತಃ ಕಲಿ ಪುರುಷನು ಬಂದು ನಮಸ್ಕರಿಸಿ ನಳನಿಂದ ಕ್ಷಮಾದಾನವನ್ನು ಪಡೆದು ಹೋದ.

ನಂತರ ಸಾಧ್ವೀಮಣಿಯಾದ ದಮಯಂತಿಯನ್ನೂ ಮಕ್ಕಳನ್ನೂ ತನ್ನ ಅರಮನೆಗೆ ಸಮ್ಮಾನ ಸಹಿತ ಕರೆಸಿಕೊಂಡು ಧರ್ಮ ಮಾರ್ಗದಿಂದ ರಾಜ್ಯಭಾರ ಮಾಡುತ್ತಾ ವರಪುರ ಚೆನ್ನಿಗರಾಯನ ಕೃಪೆಗೆ ಪಾತ್ರನಾಗಿ ಸುಖ ಸಂತೋಷದಿಂದ ಇಹಪರಗಳನ್ನು ಸಾಧಿಸಿದ.

ಈ ಇತಿಹಾಸವನ್ನು ವನವಾಸದಿಂದ ಖಿನ್ನನಾಗಿದ್ದ ಧರ್ಮರಾಜನಿಗೆ ಸಮಾಧಾನ ಹೇಳುವ ಸಂದರ್ಭದಲ್ಲಿ ಲೋಮಶ ಮಹರ್ಷಿಗಳು ತಿಳಿಸಿದರು.

ಇಂಥ ಪುಣ್ಯಶ್ಲೋಕರ ಇತಿಹಾಸವನ್ನು ಹೇಳಿ ಕೇಳಿದವರಿಗೆ ಪುಣ್ಯ ಬರುವುದು. ಸಕಲ ಸನ್ಮಂಗಳಗಳಾಗುವುವು.

ಈ 'ನಳಚರಿತ್ರೆ'ಯಲ್ಲಿ ಎದ್ದು ಕಾಣುವ ಅಂಶವೆಂದರೆ ಕನಕದಾಸರ ಔಚಿತ್ಯ ಪ್ರಜ್ಞೆ. ಎಲ್ಲೂ ಅನಗತ್ಯ ವಿಸ್ತಾರವಿಲ್ಲ. ಅದು ನಿಸರ್ಗದ ವರ್ಣನೆಯ ಪ್ರಸಂಗವಾಗಲೀ ಪಾತ್ರಗಳ ಶೀಲ ಚಾರಿತ್ರ್ಯದ ನಿರೂಪಣೆಯ ಸಂದರ್ಭವಾಗಲೀ ಹಿತಮಿತವಾಗಿದೆ. ಮನೋಜ್ಞವಾಗಿದೆ. ಕಾವ್ಯ ಓದಿಸಿ ಕೊಂಡು ಹೋಗುತ್ತದೆ. ಅತ್ಯಂತ ಪ್ರಭಾವಶಾಲಿಯಾಗಿದೆ.



# ದಾಸರ ಸಾಹಿತ್ಯ ಕೃತಿಗಳು-೨

## ಮೋಹನ ತರಂಗಿಣೀ

ಕನಕದಾಸರ ಪ್ರೌಢಕೃತಿ ಮೋಹನತರಂಗಿಣಿ. ನಳಚರಿತ್ರೆಯಲ್ಲಿ ನಳದಮಯಂತಿಯಾದಿ ಪಾತ್ರಗಳೆಲ್ಲರೂ ಮರ್ತ್ಯರು. ಅಲ್ಲಿ ನಿರೂಪಿತವಾಗಿ ರುವ ಪ್ರೇಮ ಲೌಕಿಕವಾದರೂ ಲೋಕೋತ್ತರ ದಿವ್ಯತೆಯಿಂದ ಶೋಭಿಸು ತ್ತಿದೆ. ಆದೇ ಮೋಹನತರಂಗಿಣಿಯ ಪಾತ್ರರೆಲ್ಲರೂ ಪುರಾಣ ಪ್ರಸಿದ್ಧರು. ಕೃಷ್ಣ-ರುಕ್ಮಿಣಿ, ಉಷಾ-ಅನಿರುದ್ಧ, ರತಿ-ಮನ್ಮಥ ಎಲ್ಲರೂ ದೇವತೆಗಳು. ಕನಕದಾಸರು ಆ ದಿವ್ಯ ಪಾತ್ರಗಳ ಪ್ರೇಮಗಾಥೆಯನ್ನು ಮರ್ತ್ಯದ ಧರಾತಳ ದಲ್ಲಿ ಚಿತ್ರಿಸಿದ್ದಾರೆ. ಈ ಕಾವ್ಯದಲ್ಲಿ ಶೃಂಗಾರ ಮಣ್ಣಿನ ವಾಸನೆಯಿಂದ ಕೂಡಿದ್ದು ಸಹೃದಯರ ಹೃನ್ಮನಗಳನ್ನು ಸೂರೆಗೊಳ್ಳುತ್ತದೆ.

ಈ ಕಾವ್ಯದಲ್ಲಿ ಇನ್ನೊಂದು ವೈಶಿಷ್ಟ್ಯವಿದೆ. ಪೌರಾಣಿಕ ಪಾತ್ರ ಹಾಗೂ ಪುರಾಣದ ಕಥೆಯಾದರೂ ಕಾವ್ಯದ ಹಾಸುಹೊಕ್ಕಾಗಿರುವುದು ಸತಿಪತಿಯರ ಸಂಭಾಷಣೆ. ಕವಿ ತನ್ನ ಪ್ರೇಯಸಿಗೆ ಈ ಕಾವ್ಯವನ್ನು ಮನ ಸಿಟ್ಟು ಕೇಳಲು ಹೇಳುತ್ತಾನೆ. 'ಹಿತಮಿತ ಶಬ್ದಗಳ ಪ್ರೌಢ ಕೃತಿಯಾಗಿದೆ ಈ ಕಾವ್ಯ. ಇಲ್ಲಿಯ ವ್ಯಂಗೋಕ್ತಿಗಳು ಗಮನಕ್ಕೆ ಬಾರದೆ ನುಸುಳಿಹೋಗ ಬಾರದು. ಧ್ವನಿಯನ್ನು ಸೂಕ್ಷ್ಮ ಬುದ್ಧಿಯಿಂದ ಅರಿಯಬೇಕು. ಅರ್ಥ ಗಾಂಭೀರ್ಯವನ್ನು ದತ್ತಚಿತ್ತರಾಗಿ ಅರಿಯಬೇಕು. ರಸಭಾವಗಳ ಮಾಧುರ್ಯವನ್ನು ಮುಕ್ತಮನಸ್ಸಿನಿಂದ ಆಸ್ವಾದಿಸಬೇಕು. ಮೈಯೆಲ್ಲ ಕಿವಿಯಾಗಿ ಕೇಳಿದರೇನೇ ನನ್ನ ಕಾವ್ಯ ತನ್ನ ಸೊಬಗಿನ ಸಿರಿಯನ್ನು ಬಿಚ್ಚಿ

ತೋರಿಸಬಲ್ಲದು' ಎಂದು ಎಚ್ಚರಿಸುವ ಮಾತಿನಲ್ಲಿ ಅತಿಶಯೋಕ್ತಿ ಇಲ್ಲ. ಮೋಹನ ತರಂಗಿಣಿಯನ್ನು ಓದಿದ ರಸಿಕರಿಗೆ ಇದು ಜಂಬದ ಮಾತುಗಳಲ್ಲ ಎಂಬ ಅರಿವು ಸಹಜವಾಗಿ ಬರುವುದು.

ಆದರೆ ಒಮ್ಮೊಮ್ಮೆ ಕವಿ ಅದೇ ಕಾವ್ಯದಲ್ಲಿ ತನ್ನ ಬಗ್ಗೆ ಹೇಳಿಕೊಂಡಿರುವ ಕೆಲವು ಮಾತುಗಳನ್ನು ನಂಬಬೇಕೆ ಬಿಡಬೇಕೆ ಎಂಬ ಸಂಶಯ ಮೂಡಿಬರುತ್ತದೆ. ವಿಧಿ ನನಗೆ ವಿದ್ಯೆಯ ಬರೆಯುವುದೆ ಮರೆತಿಹನು. ನಾನೆತ್ತ, ಈ ಪ್ರೌಢ ಕಾವ್ಯವೆತ್ತ ! ಅಸಂಭವ. ಇದರಲ್ಲಿನ ಒಂದು ಶಬ್ದವಾದರೂ ನನ್ನದಲ್ಲ. ಗುಬ್ಬಿಯ ಕೊರಳಿಗೆ ಗೋಧಿಯ ಚೀಲವನ್ನು ಕಟ್ಟಿದರೆ ಅದಕ್ಕೆ ಸಂತೋಷವೇನೋ ಆದೀತು. ಆದರೆ ಅದನ್ನು ಹೊತ್ತು ಆಗಸದಲ್ಲಿ ಹಾರಬಲ್ಲುದೆ ? –ಮುಂತಾಗಿ ಕವಿ ಹೇಳಿಕೊಂಡಿರುವುದುಂಟು.

ಸಹೃದಯರು ಈ ಪರಸ್ಪರ ವಿರೋಧಗಳಾಗಿ ತೋರುವ ಕವಿ ವಚನವನ್ನು ತೂಗಿನೋಡಬೇಕು. ಒಂದೆಡೆ ಕವಿಯು ತನ್ನ ಹಾಗೂ ತನ್ನ ಕಾವ್ಯದ ಯೋಗ್ಯತೆಯನ್ನು ಅರಿತಿರುವ ಆತ್ಮವಿಶ್ವಾಸದಿಂದ ಕೂಡಿದವನು. ಇನ್ನೊಂದೆಡೆ ಅತಿ ವಿನೀತ, ಉದ್ಧತನಲ್ಲ– ವಿನಯಶೀಲ ಎಂಬುದು ಅರಿವಾಗುವುದು.

ಮೋಹನ ತರಂಗಿಣಿ ಒಂದು ಮಹಾಕಾವ್ಯ. ಅಷ್ಟಾದಶ ವರ್ಣನೆಗಳಿಂದ ತುಂಬಿತುಳುಕುತ್ತಿರುವ ಕಾವ್ಯ. ಈ ವರ್ಣನೆಯ ಮಹಾರಣ್ಯದಲ್ಲಿ ಬಹು ಎಚ್ಚರದಿಂದ ಕಥಾನಕದ ಎಳೆಯನ್ನು ಅನುಸರಿಸಿಕೊಂಡು ಹೋದರೆ ಕಥನಶೈಲಿಯ ಅರಿವಾಗುವುದು.

ಸಮುದ್ರದ ಮಧ್ಯದಲ್ಲಿ ನಿರ್ಮಿತವಾದ ದ್ವಾರಕೆಯ ಸೌಂದರ್ಯ ಅನುಪಮವಾದುದು. ಅಲ್ಲಿ ಅರಮನೆಯ ಅಂತಃಪುರದಲ್ಲಿ ಒಮ್ಮೆ ಶ್ರೀಕೃಷ್ಣ

ರುಕ್ಮಿಣಿ, ಸತ್ಯಭಾಮೆಯೇ ಮೊದಲಾದ ರಾಣಿಯರೊಂದಿಗೆ ಸರಸ-ಸಲ್ಲಾಪ ಗಳನ್ನಾಡುತ್ತಾ ವಿರಾಜಿಸಿದ್ದಾನೆ ಆಗ ರುಕ್ಮಿಣಿಯು ಕೃಷ್ಣನೆದುರಿನಲ್ಲಿ ಸಂತಾನಾಪೇಕ್ಷೆಯನ್ನು ವ್ಯಕ್ತಪಡಿಸುತ್ತಾಳೆ. "ಇದು ಸಕಾಲ. ನಾನು ಹಿಂದೆ ಮನ್ಮಥನಿಗೆ ವರವಿತ್ತಿದ್ದೆ. ಅವನು ನಿನ್ನಲ್ಲಿ ಮಗನಾಗಿ ಹುಟ್ಟು ತ್ತಾನೆ" ಎಂದು ಹೇಳುತ್ತಾನೆ. ಅದರಂತೆ ಮನ್ಮಥನೇ ಪ್ರದ್ಯುಮ್ನ ಎಂಬ ಹೆಸರಿನಿಂದ ಚೆಲುವಿನ ಪುತ್ಥಳಿಯಾಗಿ ರುಕ್ಮಿಣಿಯ ಮಗನಾಗಿ ಹುಟ್ಟು ತ್ತಾನೆ.

ಕೃಷ್ಣ ವರ ಕೊಟ್ಟ ಸಂದರ್ಭವನ್ನು ಕವಿ ವಿವರಿಸಿದ್ದಾನೆ ಒಮ್ಮೆ ತಾರಕಾಸುರನ ಉಪಟಳವನ್ನು ತಪ್ಪಿಸೆಂದು ದೇವತೆಗಳು ಬ್ರಹ್ಮದೇವನಲ್ಲಿ ಮೊರೆ ಇಟ್ಟರು. ಆಗ 'ಮಹಾದೇವನ ಸದ್ಯೋಜಾತ ಮಗನಿಂದ ಮಾತ್ರ ತಾರಕಾಸುರನ ಸಂಹಾರ ಸಾಧ್ಯ. ಆದ್ದರಿಂದ ಏನಾದರೂ ಉಪಾಯಮಾಡಿ ಸಮಾಧಿಸ್ಥನಾದ ಶಂಭುವಿನ ಮನಸ್ಸನ್ನು ಪ್ರಸನ್ನೀಕರಿಸಿಕೊಳ್ಳಿ. ಈ ಕಾರ್ಯವನ್ನು ಕಂದರ್ಪನ ನೆರವಿನಿಂದ ನೀವು ಸಾಧಿಸಲು ಸಾಧ್ಯ" ಎಂದು ಬ್ರಹ್ಮದೇವನು ತಿಳಿಸಿದನು. ದೇವತೆಗಳು ಅದರಂತೆ ಕಂದರ್ಪನನ್ನು ಕಾಡಿ ಬೇಡಿ ಮನ ಒಲಿಸಿಕೊಂಡು ಮಹಾದೇವನನ್ನು ಸಮಾಧಿಯಿಂದ ಎಚ್ಚರಿ ಸಲು ಕಳುಹಿದವರು. ಕಂದರ್ಪನ ಪ್ರಯತ್ನ ಫಲಿಸಿತು. ಆದರೆ ಅದಕ್ಕಾಗಿ ಆತ್ಮಾಹುತಿಯನ್ನು ತೆರಬೇಕಾಗಿ ಬಂದಿತು. ಹರನ ಉರಿಗಣ್ಣಿನ ಜ್ವಾಲೆ ಯಲ್ಲಿ ಬೆಂದು ಬೂದಿಯಾಗಬೇಕಾಯಿತು.

ರತಿ ವಿಲಪಿಸತೊಡಗಿದಳು. ಕರುಣಾ ಸಮುದ್ರನಾದ ಶಿವನು 'ನಿನ್ನ ಪತಿಯು ಅನಂಗನಾಗಿದ್ದುಕೊಂಡೇ ಮೊದಲಿನಂತೆ ಪ್ರಭಾವಶಾಲಿಯಾಗಿರು ವಂತೆ ಅನುಗ್ರಹಿಸುವೆ' ಎಂದು ವರವಿತ್ತನು. ಮುಂದೆ ಶ್ರೀಕೃಷ್ಣನ ಮಗ ನಾಗಿ ನಿನ್ನ ಪತಿ ಹುಟ್ಟುವನು. ಆಗ ನಿಮ್ಮಿಬ್ಬರ ಸಮಾಗಮವಾಗುವು

ದೆಂದು ಪಾರ್ವತಿಯು ವರವಿತ್ತಳು. ಒಟ್ಟಿನಲ್ಲಿ ಕುಸುಮಶರನ ಜನ್ಮಕ್ಕಾಗಿ ರತಿ ಕಾದು ಕುಳಿತಿದ್ದಾಳೆ.

ಹೀಗೆ ವರ ಪಡೆದಿದ್ದರೂ ಸಹ ಪತಿಯ ವಿರಹದಲ್ಲಿ ವ್ಯಾಕುಲಳಾಗಿ ಆ ವಿರಹಿಣಿಯು ಶಂಬರಾಸುರನ ಉಪವನದಲ್ಲಿ ಹುಚ್ಚಿಯಂತೆ ಅಲೆದಾಡುತ್ತಿದ್ದಳು. ಅಸುರನ ಪತ್ನಿಗೆ ಈ ಸಮಾಚಾರ ತಿಳಿದುಬಂದಿತು. ಶಂಬರಾಸುರನಿಗೂ ಸಹ ಉದ್ಯಾನದ ರಕ್ಷಕರು ಸಮಾಚಾರ ಕೊಟ್ಟರು. ಅವನು ಪಲ್ಲಕ್ಕಿಯನ್ನು ಕಳಿಸಿ ಅವಳನ್ನು ಬರಮಾಡಿಕೊಂಡ. ಅವಳ ಸೌಂದರ್ಯವನ್ನು ಎವೆ ಇಕ್ಕದೆ ನೋಡಿ ಕಿಂಕರ್ತವ್ಯ ವಿಮೂಢನಾಗಿ ಬಿಟ್ಟ. ಕ್ಷಣ ಕಾಲದಲ್ಲಿ ಚೇತರಿಸಿಕೊಂಡು ವಿನಯ ಪೂರ್ವಕವಾಗಿ ಕೇಳಿದ – 'ಭದ್ರೆ! ನೀನು ಯಾರು ? ನಿನ್ನ ಹೆಸರೇನು ?'– ಆದರೆ ಅವನ ಪ್ರಶ್ನೆಗಳಿಗೆ ರತಿ ಉತ್ತರಿಸಲೇ ಇಲ್ಲ. ಆಗ ಅಸುರನು ತನ್ನ ಪತ್ನಿಯ ವಶಕ್ಕೆ ಅವಳನ್ನೊಪ್ಪಿಸಿ 'ಈ ಕುರಂಗಲೋಚನೆಯನ್ನು ನನ್ನವಳಾಗುವಂತೆ ಪ್ರೇರೇಪಿಸು' ಎಂದು ಆದೇಶವಿತ್ತನು. ಆದರೆ ಆ ಅಸುರಾಧಿಪನ ರಾಣಿಯು ಸಹಾನುಭೂತಿಯಿಂದ ವಿಚಾರಿಸಿ, ರತಿಯ ವೃತಾಂತವನ್ನೆಲ್ಲ ಅರಿತವಳಾಗಿ, ಅವಳಿಗೆ ಅಭಯವನ್ನಿತ್ತು, ತನ್ನ ಅಂತಃಪುರದಲ್ಲಿ ದಾಸಿಯನ್ನಾಗಿಟ್ಟುಕೊಂಡಳು. ಮತ್ತು ಪರಸತಿಯರನ್ನು ಕುದೃಷ್ಟಿಯಿಂದ ನೋಡಬಾರದೆಂದೂ ಅಂಥವರ ಪಾಡೇನಾಗುವುದೆಂಬುದಕ್ಕೆ ಇಂದ್ರನಿಗಾದ ದುರ್ಗತಿಯು ತಿಳಿಸುವುದೆಂದೂ ತನ್ನ ಪತಿಯನ್ನು ಎಚ್ಚರಿಸಿದಳು.

ಶಂಬರಾಸುರನ ಮೃತ್ಯು ಮನ್ಮಥನಿಂದ ಎಂಬುದು ತಿಳಿದ ವಿಷಯವಾಗಿತ್ತು. ಮಹೇಶ್ವರನ ಕೋಪಾಗ್ನಿಯಲ್ಲಿ ಅಸಮಶರನು ಉರಿದು ಬೂದಿಯಾದನೆಂಬುದನ್ನು ಕೇಳಿದ ಅಸುರೇಶ್ವರನು ನಿಶ್ಚಿಂತೆಯಿಂದ ಇದ್ದುಬಿಟ್ಟನು.

ಆದರೆ ಒಂದು ಸಲ ನಾರದರು ಅವನ ಆಸ್ಥಾನಕ್ಕೆ ಬಂದರು. ಮತ್ತು ರುಕ್ಮಿಣಿಯ ಮಗನಾಗಿ ಮನ್ಮಥನು ಹುಟ್ಟಿರುವ ಸಮಾಚಾರವನ್ನು ತಿಳಿಸಿದರು. ಹಾಗೂ ಶಕ್ಯವಿದ್ದರೆ ಮೃತ್ಯುವನ್ನು ಎಳೆಯದರಲ್ಲೇ ಚಿವುಟಿ ಹಾಕುವುದು ಜಾಣತನವೆಂದು ಬೋಧಿಸಿದರು. ದೈತ್ಯೇಂದ್ರನು ವಾಯುರೂಪವನ್ನು ಧರಿಸಿ ಶ್ರೀ ಕೃಷ್ಣನ ಅಂತಃಪುರವನ್ನು ಪ್ರವೇಶಿಸಿದನು. ಎರೆದು ಮಲಗಿಸಿದ್ದ ಶಿಶು ಪ್ರದ್ಯುಮ್ನನನ್ನು ಅಪಹರಿಸಿದನು ಅಂತರ್ಯಾಮಿಯಾದ ಶ್ರೀಕೃಷ್ಣನ ಪ್ರೇರಣೆಯಂತೆ ಆ ಶಿಶುವನ್ನು ಸಮುದ್ರದಲ್ಲಿ ಎಸೆದುಬಿಟ್ಟನು. ಕೈಯಾರೆ ಶಿಶುವನ್ನು ಕೊಲ್ಲಲು ಮನಸ್ಸಾಗಲಿಲ್ಲ. ಶಿಶು ಹತ್ಯೆಯನ್ನು ತಪ್ಪಿಸಿಕೊಂಡೆನೆಂದುಕೊಂಡು ನೆಮ್ಮದಿಯಿಂದ ಅರಮನೆಗೆ ಹಿಂತಿರುಗಿದನು.

ಆ ಶಿಶುವನ್ನು ಮೀನು ನುಂಗಿತು. ಅದನ್ನು ಬೆಸ್ತರು ಹಿಡಿದರು. ಮತ್ತು ದೈತ್ಯೇಂದ್ರನಿಗೆ ಆ ದೊಡ್ಡ ಮೀನನ್ನು ಉಪಾಯನವಾಗಿತ್ತರು. ಅವನು ಅಡುಗೆ ಮನೆಗೆ ಅದನ್ನು ಕಳಿಸಿದ. ಅದನ್ನು ರತಿ ಹೆಚ್ಚಿದಳು. ಮಗುವನ್ನು ಕಂಡು ಅಚ್ಚರಿಗೊಂಡಳು. 'ಈ ಶಿಶುವನ್ನು ರಕ್ಷಿಸು ಇವನೇ ನಿನ್ನ ಪತಿ ಮನ್ಮಥ ಎಂದು ಇವನು ಶಂಬರಾಸುರನನ್ನು ಸಂಹರಿಸಿ ಬಿಡುವನೋ ಅಂದು ಇವನಲ್ಲಿ ಪುರುಷತ್ವವು ಪೂರ್ಣ ವಿಕಾಸ ಹೊಂದುವುದು. ಆಗ ನಿಮ್ಮಿಬ್ಬರ ಜೀವನವೂ ಸುಖದ ಬೀಡಾಗುವುದು' ಎಂದು ಅಶರೀರ ವಾಣಿ ಮೊಳಗಿತು. ರತಿಯು ಬಹು ಎಚ್ಚರದಿಂದ ಈ ಶಿಶುವನ್ನು ಪಾಲಿಸ ತೊಡಗಿದಳು.

'ಸ್ಮರನ ಇನ್ನೊಬ್ಬ ಪ್ರೇಯಸಿ ಇದ್ದಳು. ಅವಳ ಮಗು ಇದು. ಅವನ ಲಾಲನೆ-ಪಾಲನೆಯ ಭಾರವನ್ನು ನನಗೆ ವಹಿಸಿಕೊಟ್ಟಿದ್ದಾಳೆ ನಿಮ್ಮ ಅನುಮತಿ ದೊರೆತಲ್ಲಿ ನಾನು ಅದನ್ನು ಇಲ್ಲೇ ಇಟ್ಟುಕೊಂಡು ನೋಡಿ

ಕೊಳ್ಳುವೆ' ಎಂದು ಶಂಬರಾಸುರನನ್ನು ರತಿ ಕೇಳಿಕೊಂಡಳು ದೈತ್ಯೇಂದ್ರನು ಸಮ್ಮತಿಸಿದ.

ವಿಧಿಯ ಪ್ರೇರಣೆ. ದೈತ್ಯೇಂದ್ರನಿಗೆ ಆ ಶಿಶುವಿನ ಮೇಲೆ ದಿನದಿನಕ್ಕೂ ಪ್ರೀತಿ ಹೆಚ್ಚತೊಡಗಿತು. ಆತನು ಅಡ್ಡಾಡುವಷ್ಟು ದೊಡ್ಡವನಾದ ಮೇಲೆ ಒಂದು ದಿನ ಅವನನ್ನು ತನ್ನ ಗರಡಿಮನೆಗೆ ಕರೆದೊಯ್ದನು. ಮತ್ತು ಕಾವಲು ಕಾಯುತ್ತಿದ್ದ ಭೇತಾಳನ ಬಳಿ ಅವನನ್ನು ಕುಳ್ಳಿರಿಸಿ ತಾನು ವ್ಯಾಯಾಮ ಮಾಡ ತೊಡಗಿದನು. ಮಗುವು ಕುತೂಹಲದಿಂದ ನೋಡಿತು. ಮತ್ತು ಅನುಕರಿಸತೊಡಗಿತು. ಅದರಿಂದ ಸಂತೋಷಗೊಂಡ ಅಸುರಾಧಿಪನು ತಾನು ಶುಕ್ರಾಚಾರ್ಯರಿಂದ ಕಲಿತ ಸಮಸ್ತ ವಿದ್ಯೆಯನ್ನೂ ಆ ಬಾಲಕನಿಗೆ ಹೇಳಿಕೊಟ್ಟನು. ಇದಕ್ಕೆ ತಾನೇ ಶ್ರೀಕೃಷ್ಣನ ಮಾಯೆ ಎನ್ನುವುದು !

ಸ್ಮರನಿಗೆ ಒಂದೆಡೆ ರತಿಯ ಲಾಲನೆ ಪಾಲನೆ ಇನ್ನೊಂದೆಡೆ ಅಸುರಾರಿಯ ವಾತ್ಸಲ್ಯ ಹಾಗೂ ಶಿಕ್ಷಣ – ಸರ್ವತೋಮುಖ ವಿಕಾಸ ಹೊಂದುತ್ತಾ ಪ್ರವರ್ಧಮಾನನಾಗಿದ್ದನು. ಮತ್ತೆ ಒಂದು ಸಲ ನಾರದರು ಶಂಬರಾಸುರನ ಅರಮನೆಗೆ ದಯಮಾಡಿದರು. ಏಕಾಂತದಲ್ಲಿ ಅಸುರಾಧಿಪನನ್ನು ಸಂಧಿಸಿದರು. ಕೋಪೋದ್ದೀಪಿತರಂತೆ ಬಿಸಿಯುಸಿರು ಬಿಡುತ್ತಾ – 'ಮೂರ್ಖ, ನೀನಾಗಿ ನಿನ್ನ ವಿನಾಶಕ್ಕೆ ಕಾರಣನಾಗಿ ಬಿಟ್ಟೆ. ಶ್ರೀಕೃಷ್ಣನ ಅಂತಃಪುರದಿಂದ ಅಪಹರಿಸಿ ತಂದ ಮಗುವನ್ನು ಕೈಯಾರೆ ಕೊಲ್ಲದೆ ಸಮುದ್ರದಲ್ಲಿ ಎಸೆದು ಬಂದೆಯಲ್ಲ ಅದೇ ಮಗು ಈಗ ನಿನ್ನರಮನೆಯಲ್ಲಿ ಬೆಳೆದು ದೊಡ್ಡದಾಗಿದೆ. ಮೇಲಾಗಿ ನೀನು ಕಲಿತ ವಿದ್ಯೆಯನ್ನೆಲ್ಲ ಅದಕ್ಕೆ ಕಲಿಸಿದ್ದೀಯೆ. ಆ ಮಗು ಮನ್ಮಥನೆಂದು ನಿನಗೆ ತಿಳಿಸಿರಲಿಲ್ಲವೆ ? ಈಗ ನೋಡು ನಿನ್ನ ಮನೆಯಲ್ಲಿ ಅಡುಗೆ ಮಾಡುತ್ತಿರುವ ದಾಸಿ ರತಿ ಎಂದು ಗೊತ್ತೆ ? ಅವರಿಬ್ಬರ ವಿಲಾಸ

ನಿನ್ನರಮನೆಯಲ್ಲಿ ಹಗಲಿರುಳೂ ನಡೆಯುತ್ತಿದೆ ಎಂದು ಬಲ್ಲೆಯಾ ?' ಎಂದು ತಿಳಿಸಿಬಿಟ್ಟರು. ಅನಂತರ 'ದೈತ್ಯೇಂದ್ರ, ಬ್ರಹ್ಮದೇವನು ನಿನಗೊಂದು ಎಚ್ಚರದ ಮಾತನ್ನು ಹೇಳಿದ್ದನಲ್ಲ, ನೆನಪಿದೆಯೆ ! 'ನಿನ್ನಿಂದ ಎಲ್ಲ ವಿದ್ಯೆಯನ್ನೂ ಕಲಿತ ನಿನ್ನ ಶಿಷ್ಯನೇ ನಿನಗೆ ಮೃತ್ಯುವಾಗುವನು,' ಎಂದು. ಈಗ ಅದು ಸರಿಹೋಯಿತಷ್ಟೆ. ಈಗಲಾದರೂ ಮಾಯಾಮಮತೆಯನ್ನು ಬಿಟ್ಟು ಚಿಕ್ಕವನಾಗಿರುವಾಗಲೇ ಆ ಬಾಲಕನನ್ನು ಸಂಹರಿಸಿ ಬಿಡು. ಪುಟ್ಟವನೆಂದು ಉಪೇಕ್ಷಿಸಬೇಡ. ಕಪಟನಾಟಕ ಸೂತ್ರಧಾರಿ ಶ್ರೀ ಕೃಷ್ಣನ ಮಗನಲ್ಲವೆ ? ನಿನ್ನಿಂದ ಕಪಟ ವಿದ್ಯೆಯನ್ನು ಕಲಿತುಬಿಟ್ಟಿದ್ದಾನೆ" ಎಂದು ಎಚ್ಚರಿಸಿದರು. ಅವನ ಅನುಮತಿಯನ್ನು ಪಡೆದು ಏಕಾಂತದಲ್ಲಿ ರತಿಯನ್ನೂ ಪ್ರದ್ಯುಮ್ನನನ್ನೂ ಸಂಧಿಸಿ ಹರಸಿದರು. ಅನಿವಾರ್ಯವಾದರೆ ಹೆದರದೆ ಯುದ್ಧಮಾಡು ಎಂದು ಪುಸಲಾಯಿಸಿ ಹೊರಟುಹೋದರು.

ದೇವರ್ಷಿಗಳ ಅಭೀಷ್ಟ ಸಿದ್ಧಿಸಿತು. ಶಂಬರಾಸುರನಿಗೂ ಪ್ರದ್ಯುಮ್ನ ನಾಮಕನಾದ ಮನ್ಮಥನಿಗೂ ಯುದ್ಧ ನಡೆಯಿತು. ಮುರಹರನ ಸುತನಿಗೆ ಜಯ ಲಭಿಸಿತು. ದೇವತೆಗಳು ಸಂತೋಷಗೊಂಡರು. ಹೂಮಳೆಗರೆದು ಸ್ಮರನನ್ನು ಸನ್ಮಾನಿಸಿದರು. 'ಶಂಬರಾರಿ' ಎಂಬ ಬಿರುದನ್ನಿತ್ತು ಗೌರವಿಸಿದರು.

ಪ್ರದ್ಯುಮ್ನನು ಶಂಬರಾಸುರನ ಶವಸಂಸ್ಕಾರಕ್ಕೆ ವ್ಯವಸ್ಥೆ ಮಾಡಿದನು. ರಾಜ್ಯಕೋಶಾದಿಗಳನ್ನೆಲ್ಲಾ ನೋಡಿಕೊಳ್ಳುವಂತೆ ಮಂತ್ರಿಗಳಿಗೆ ಒಪ್ಪಿಸಿದನು. ತಾನು ದ್ವಾರಕೆಗೆ ಹೋಗಬೇಕೆಂದಿರುವುದಾಗಿ ತಿಳಿಸಿದನು. ಅವನಿಗಾಗಿ ಒಬ್ಬ ಮಂತ್ರಿಯು ಪುಷ್ಪಕ ವಿಮಾನವನ್ನು ಸಿದ್ಧಗೊಳಿಸಿದನು. ದೈತ್ಯೇಂದ್ರನ ಕೋಷಾಗಾರದಿಂದ ಅನುಪಮ ಅನರ್ಘ್ಯ ರತ್ನಗಳನ್ನು ತಂದೊ

ಪ್ಪಿಸಿದನು. ರತಿಯನ್ನು ಕರೆದುಕೊಂಡು ವಿಮಾನದಲ್ಲಿ ಪ್ರದ್ಯುಮ್ನನು ದ್ವಾರಕೆಗೆ ಬಂದಿಳಿದನು.

ಆದರೆ ಅಲ್ಲಿ ಅವನನ್ನು ಗುರುತಿಸುವವರು ಯಾರೂ ಇಲ್ಲವಾಯಿತು. ರುಕ್ಮಿಣಿಯು, 'ನನ್ನ ಮಗನು ಬದುಕಿದ್ದರೆ ಇಷ್ಟೇ ದೊಡ್ಡವನಾಗಿರುತ್ತಿದ್ದನಲ್ಲ' ಎಂದುಕೊಂಡು ನಿಟ್ಟುಸಿರು ಬಿಟ್ಟಳು ಮತ್ತು ಏಕಾಂತದಲ್ಲಿ ಶ್ರೀ ಕೃಷ್ಣನನ್ನು ಕೇಳಿದಳು – "ನೀನು ಸರ್ವಾಂತರ್ಯಾಮಿ. ನೀನರಿಯದ್ದು ಏನಿದೆ ? ಈ ತರುಣನಾರು ? ಹೇಳು, ನನ್ನ ಮಗನೇ ?" ಎಂದು ಕೇಳಿದಳು. ಕೃಷ್ಣನು "ಅಹುದು" ಎಂದನು. ಅಷ್ಟರಲ್ಲಿ ನಾರದರು ಅಲ್ಲಿಗೆ ಬಂದರು. ಸಕಲ ವೃತ್ತಾಂತವನ್ನೂ ವಿವರಿಸಿದರು. ಶಂಬರಾರಿಯ ರೋಚಕ ಚರಿತ್ರೆಯನ್ನು ಕೇಳಿ ಎಲ್ಲರೂ ಸಂತೋಷಪಟ್ಟರು ಮಗ ಮತ್ತು ಸೊಸೆಯನ್ನು ಪಡೆದ ರುಕ್ಮಿಣಿಯು ಸಂತೋಷದಿಂದ ಶ್ರೀ ಕೃಷ್ಣನಿಗೂ ನಾರದರಿಗೂ ವಂದಿಸಿದಳು. ಕೃಷ್ಣನು ಮುಗುಳ್ನಗೆ ಸೂಸುತ್ತಾ 'ನಿನಗೆ ಮೊಮ್ಮಗನನ್ನು ಆಡಿಸುವ ಭಾಗ್ಯ ಶೀಘ್ರದಲ್ಲೇ ಫಲಿಸಲಿ' ಎಂದು ಆಶೀರ್ವದಿಸಿದನು.

ಆ ಹೊತ್ತಿಗೆ ಸರಿಯಾಗಿ ಅಲ್ಲಿಗೆ ಬಲರಾಮ ಬಂದ. ಶ್ರೀ ಕೃಷ್ಣನಿಂದ ಎಲ್ಲವನ್ನೂ ತಿಳಿದು ಸಂತುಷ್ಟನಾದ. ರತಿ ಮನ್ಮಥರ ಅಂದರೆ ಪ್ರದ್ಯುಮ್ನ ಮತ್ತು ರತಿಯ ವಿವಾಹವನ್ನು ಅತ್ಯಂತ ವೈಭವದಿಂದ ನೆರವೇರಿಸಲಾಯಿತು. ರುಕ್ಮಿಣಿಯು ನಾರದರಿಗೆ ಕೃತಜ್ಞತಾಪೂರ್ವಕ ವಂದಿಸಿದಳು. ಆಗ ನಾರದರು ಹೇಳಿದರು — "ನೀನು ಶ್ರೀದೇವಿ ಶ್ರೀ ಕೃಷ್ಣನೇ ಶ್ರೀಮನ್ನಾರಾಯಣನು. ಈ ಜಗನ್ನಾಟಕದ ಸೂತ್ರಧಾರರು ನೀವು" ಎಂದು ಸ್ತುತಿಸಿ ಹೊರಟು ಹೋದರು.

ವಿವಾಹದ ನಂತರ ಹದಿನಾರು ಸಾವಿರ ನೂರೆಂಟು ರಾಣಿಯರು, ಮಕ್ಕಳು ಹಾಗೂ ಸೊಸೆಯರೊಂದಿಗೆ ಶ್ರೀ ಕೃಷ್ಣನು ಜಲಕ್ರೀಡೆಯನ್ನಾಡಿ

ದನು. ಶ್ರೀ ಕೃಷ್ಣನ ಆದೇಶದಂತೆ ಅಂದೇ ಶುಭಮುಹೂರ್ತದಲ್ಲಿ ವೈದಿಕ ವಿಧಿಯಂತೆ ರತಿ ಪ್ರದ್ಯುಮ್ನರನ್ನು ಸುಮಂಗಲಿಯರು ಕೋಣೆಗೆ ಕಳಿಸಿದರು.

ರತಿ ಗರ್ಭವತಿಯಾದಳು ನವಮಾಸ ತುಂಬಿದ ಮೇಲೆ ಒಬ್ಬ ತೇಜಸ್ವೀ ಮಗನನ್ನು ಪಡೆದಳು. ಅವನನ್ನು ನೋಡಿದವರು–ಶ್ರೀಕೃಷ್ಣನೇ ಬಾಲರೂಪದಿಂದ ಮತ್ತೊಮ್ಮೆ ಅವತರಿಸಿರುವನು ಎಂದುಕೊಳ್ಳುತ್ತಿದ್ದರು. ಆತನೇ ಅನಿರುದ್ಧನೆಂದು ಪ್ರಖ್ಯಾತನಾದ.

ಅವನು ಶ್ರೀ ಕೃಷ್ಣನಂತೆಯೇ ರೂಪ, ಗುಣ, ಬಲಾದಿಗಳಲ್ಲಿ ಯಾದವರ ಕಣ್ಮಣಿಯಾಗಿ ಯೌವನಾವಸ್ಥೆಗೆ ಬಂದ. ಯುವಕ ಅನಿರುದ್ಧನು ದ್ವಾರಕಾನಗರಿಯ ಆಡಳಿತವನ್ನು ನಿರ್ವಹಿಸತೊಡಗಿದ. ಶಿಕಾರಿಯಾಡುವುದು ಅವನಿಗೆ ತುಂಬಾ ಇಷ್ಟವಾದ ಹವ್ಯಾಸವಾಗಿತ್ತು.

ಆ ಕಾಲದಲ್ಲಿ ಶೋಣಿತಪುರದರಸನಾಗಿದ್ದ ಬಾಣಾಸುರ. ಅವನೋ 'ಮಾರಹರ ಪಾದ ಪಂಕೇರುಹ ಭೃಂಗ'ನಾಗಿದ್ದ. ಅತ್ಯಂತ ಭಕ್ತಿಭಾವ ಭರಿತನಾಗಿ ಶಿವನನ್ನು ಆರಾಧಿಸುತ್ತಿದ್ದ. ಅವನ ಭಕ್ತಿಗೆ ಮೆಚ್ಚಿ ಸಾಕ್ಷಾತ್ ಶಿವನೇ ಹೋಗಿ ಅವನ ಪೂಜೆಯನ್ನು ಸ್ವೀಕರಿಸುತ್ತಿದ್ದ ! ಬಾಣಾಸುರ ಶಿವಭಕ್ತನಷ್ಟೇ ಅಲ್ಲ. ಅತ್ಯಂತ ರಸಿಕ ಶಿರೋಮಣಿಯಾಗಿದ್ದ. ಅವನ ಭೋಗವಿಲಾಸವನ್ನು ವರ್ಣಿಸುವುದಾದರೂ ಎಂತು ?

ಅವನಿಗೊಬ್ಬ ಮಗಳಿದ್ದಳು. ಅವಳದೋ ಅನಿಂದ್ಯ ಸುಂದರ ರೂಪ. ಉಷಾ ಎಂದು ಅವಳ ಹೆಸರು. ಅವಳು ಪ್ರೌಢೆಯಾದಳು. ಸೌಂದರ್ಯ ಸಮುದ್ರದಲ್ಲಿ ಉಬ್ಬರ ಬಂದಂತಾಯಿತು. ಅವಳೂ ಶಿವಭಕ್ತೆ. ಒಂದು ದಿನ ಬಹು ಭಕ್ತಿಯಿಂದ ಆಶುತೋಷನನ್ನು ಅರ್ಚಿಸಿದಳು. ಅವನು ಗಿರಿಜೆ

ಯೊಂದಿಗೆ ಪ್ರತ್ಯಕ್ಷನಾದ. ಬಾಣಾಸುರನ ಪುತ್ರಿಯ ಆಶಯವನ್ನು ಅವಳ ಸಖಿ ಚಿತ್ರಲೇಖೆಯಿಂದ ತಿಳಿದ ಗಿರಿರಾಜ ಕುವರಿಯು 'ಬರುವ ವೈಶಾಖ ಶುದ್ಧ ದ್ವಾದಶೀ ಬೆಳಗಿನರ್ಝಾವ ನಿನ್ನೊಡನೆ ಯಾವ ಪುರುಷನು ಸ್ವಪ್ನದಲ್ಲಿ ವಿಹರಿಸುವನೋ ಅವನೇ ನಿನ್ನ ಪತಿಯಾಗುವನು' ಎಂದು ಹರಸಿದಳು. ಶಿವನು ಅದನ್ನು 'ತಥಾಸ್ತು' ಎಂದು ಅನುಮೋದಿಸಿದನು.

ಗಿರಿಜೆಯ ವಾಣಿ ಸತ್ಯವಾಯಿತು. ವೈಶಾಖ ಶುದ್ಧ ದ್ವಾದಶಿಯಂದು ಕೊನೆಯ ಮುಹೂರ್ತ. ಸ್ವಪ್ನದಲ್ಲಿ ಅತ್ಯಂತ ಸುಂದರನಾದ ಕುಮಾರ ನೊಡನೆ ಉಷಾ ವಿಹರಿಸಿದಳು. ಆದರೆ ಇದ್ದಕ್ಕಿದ್ದಂತೆ ಎಚ್ಚರವಾಯಿತು. ಆ ವ್ಯಕ್ತಿಯು ಅಂತಃಪುರದಲ್ಲೇ ಎಲ್ಲೋ ಅವಿತಿರಬಹುದೆಂದು ಭ್ರಮಿಸಿ ಅವನಿಗಾಗಿ ಹುಡುಕಾಡಿದಳು. ಅತೃಪ್ತ ಲಾಲಸೆಯಿಂದ ಕಂಗೆಟ್ಟಳು.

ಅಂದಿನಿಂದ ಪೂರ್ವರಾಗ ಪೀಡಿತಳಾದ ಸಖಿಯನ್ನು ಸಮಾಧಾನ ಗೊಳಿಸಲು ಚಿತ್ರಲೇಖೆ ವಿವಿಧ ರೀತಿಯಲ್ಲಿ ಯತ್ನಿಸಿದಳು. "ನೀನು ಯಾರನ್ನು ಕಂಡೆ ? ಅವನು ಯಾವ ದೇಶದವನು ? ಅವನ ಹೆಸರೇನು ? ಅವನು ಯಾರೆಂದು ಹೇಳಿದರೆ ಸಾಕು. ಆತನೊಡನೆ ಸಮಾಗಮ ಮಾಡಿ ಸುವೆ" ಎಂದು ಆಶ್ವಾಸನೆಯನ್ನಿತ್ತಳು.

ಆದರೆ ಉಷೆಗೆ ಏನೂ ತಿಳಿದಿರಲಿಲ್ಲ. ಅವನ ಸೌಂದರ್ಯ ಕಣ್ಣಿಗೆ ಕಟ್ಟಿದಂತಿತ್ತು. ಆವನ ಹೆಸರು, ಕುಲ, ಗೋತ್ರ ಏನೊಂದೂ ತಿಳಿದಿರಲಿಲ್ಲ. ಕಂಡ ರೂಪಲಾವಣ್ಯವನ್ನೂ ಆಕೆಯು ಪೂರ್ಣವಾಗಿ ಹೇಳಲು ಸಾಧ್ಯವಾಗ ಲಿಲ್ಲ. ಆ ಲೊಕೋತ್ತರ ಸೌಂದರ್ಯ ವಾಣಿಗೆ ಎಟಕುವುದೆ ?

ಇತ್ತ ತಾಯಿ ಮಗಳ ರೀತಿನೀತಿಗಳನ್ನು ಕಂಡು ಹೆದರಿ ಹೌಹಾರಿ

ದಳು. ಇವಳಿಂದ ಕುಲ ಕಲಂಕಿತವಾದೀತೆಂದು ಶಂಕಿಸಿದಳು ಅವಳ ಅಂತಃಪುರಕ್ಕೆ ಬಲವಾದ ಕಾವಲಿಗೇರ್ಪಡಿಸಿದಳು.

ಚಿತ್ರಲೇಖೆ ಬಹು ಚತುರೆ. ಅವಳು ಉಷೆಯ ಇಂಗಿತವನ್ನರಿತಿದ್ದಳು. ತನ್ನ ಸಖಿಯ ವಿರಹವನ್ನು ದೂರ ಮಾಡುವ ಯತ್ನದಲ್ಲಿ ತೊಡಗಿದಳು. ದೇವ, ದನುಜ, ಮನುಜರಲ್ಲಿ ಪ್ರಸಿದ್ಧ ಪ್ರಸಿದ್ಧರ ಚಿತ್ರವನ್ನು ಬರೆದು ಅವಳಿಗೆ ತೋರಿಸಿದಳು ಅವಳು ಇಂದ್ರ, ಅಗ್ನಿ ಮೊದಲಾದ ದೇವತೆಗಳ ಚಿತ್ರವನ್ನು ಬರೆದಳು. ಸಪ್ತ ಮನುಗಳನ್ನು ಬರೆದು ತೋರಿಸಿದಳು. ನಲ ಕೂಬರ, ಜಯಸಿಂಹ–ಇವರ ಚಿತ್ರವನ್ನೂ ಬಿಡಿಸಿದಳು. ಆದರೆ ಅವಳ ಸಖಿಯು ಒಂದನ್ನೂ ಮೆಚ್ಚಲಿಲ್ಲ. 'ನಿನ್ನ ಪ್ರಯತ್ನವೆಲ್ಲ ಗಾಜಿನ ಹರಳನ್ನು ಹೆಕ್ಕುವುದಾಯಿತಷ್ಟೆ. ನನ್ನನ್ನು ಆಲಂಗಿಸಿದ ಆ ರತ್ನವನ್ನು ಅರಿಸಲಾರದೇ ಹೋದೆ ಹೋಗಲಿ ಬಿಡು' ಎಂದು ಉಷೆ ಮುಖವನ್ನು ತಿರುಗಿಸಿಬಿಟ್ಟಳು.

ಆಗ ಚಿತ್ರಲೇಖೆಯು ಕುಸುಮನಾಭನ ಚಿತ್ರವನ್ನು ಬರೆದು ತೋರಿಸಿ ದಳು.

ಉಷೆಯು ಶ್ರೀಹರಿಯ ಚರಣಗಳನ್ನು ಕಣ್ಣಿಗೊತ್ತಿಕೊಂಡು "ಎಷ್ಟು ವಾತ್ಸಲಪೂರ್ಣ ದೃಷ್ಟಿಯಿಂದ ನನ್ನನ್ನು ನೋಡುತ್ತಿದ್ದಾನೆ" ಎಂದು ಉದ್ಗ ರಿಸಿದಳು.

ಮುಗುಳ್ನಗೆ ನಕ್ಕು ಚಿತ್ರಲೇಖೆಯು ಬಲರಾಮ, ಉದ್ಧವ, ಸಾತ್ಯಕಿ, ಕೃತವರ್ಮನೇ ಮೊದಲಾದ ಯಾದವ ವೀರರ ಚಿತ್ರಗಳನ್ನು ಬಿಡಿಸಿ ತೋರಿ ದಳು. ಅವುಗಳನ್ನು ಎವೆ ಇಕ್ಕದೆ ನೋಡಿ, ಮೆಚ್ಚಿಕೊಂಡು 'ಇವರೆಲ್ಲ ನನ್ನ ಬಂಧುಗಳೋ ಎಂಬಂತೆ ಕಾಣಿಸುತ್ತಾರಲ್ಲ' ಎಂದು ಹೇಳಿದಳು. "ಸಾಕಮ್ಮ. ನನ್ನನ್ನು ಏಕೆ ಸತಾಯಿಸುತ್ತಿರುವೆ. ನನ್ನ ಮನಮೋಹಕನ ಚಿತ್ರವನ್ನಿಟ್ಟು

ಕೊಂಡಿದ್ದರೆ ತೋರಿಸಬಾರದೆ ? ನನ್ನನ್ನೇಕೆ ಪರೀಕ್ಷಿಸುತ್ತಿರುವೆ ? " ಎಂದು ಬಲು ಬೇಸರ ಪಟ್ಟುಕೊಂಡಳು.

ಆಗ ಆತ್ಮವಿಶ್ವಾಸದಿಂದ ಕೂಡಿದ ಚಿತ್ರಲೇಖೆ ಮದನನ ಚಿತ್ರವನ್ನೇ ಬರೆದು ತೋರಿಸಿದಳು. ಉಷೆ ಅದನ್ನು ದಿಟ್ಟಿಸಿ ನೋಡಿದಳು. "ಈತ ನನ್ನ ಸ್ವಪ್ನವಿಹಾರಿಯಂತೇನೋ ಇದ್ದಾನೆ. ಆದರೆ ಆ ಮನಮೋಹಕನಲ್ಲ" ಎಂದು ತಿಳಿಸಿದಳು.

ಆಗ ಜಾಣೆಯಾದ ಚಿತ್ರಲೇಖೆ ತನ್ನ ಸಖಿಗಾಗಿ ಅನಿರುದ್ಧನ ಕಮನೀಯ ರೂಪವನ್ನು ಬರೆದು ತೋರಿದಳು.

ಉಷೆಯ ಮನಸ್ಸು ಅದರಲ್ಲಿ ತಲ್ಲೀನವಾಯಿತು. ಅವಳ ಮುಖ ಕಮಲವರಳಿತು. ಅದರ ಚರಣಗಳನ್ನು ಕಣ್ಣಿಗೊತ್ತಿಕೊಂಡಳು. ಆ ಚಿತ್ರ ವನ್ನು ತನ್ನ ತುಂಬುಸ್ತನಗಳ ಮೇಲೆ ಅಪ್ಪಿಕೊಂಡು ಮೈಮರೆತಳು.

ಕುತೂಹಲದಿಂದ ಉಷೆಯ ಪ್ರತಿಕ್ರಿಯೆಯನ್ನು ವೀಕ್ಷಿಸುತ್ತಿದ್ದ ಚಿತ್ರಲೇಖೆ ಉತ್ಸಾಹದಿಂದ ಕೇಳಿದಳು — "ಸಖೀ ! ಇವನೇ ನಿನ್ನ ಮನ ಸೂರೆಗೊಂಡ ಭಾಗ್ಯವಂತನೆ ?" ಎಂದು.

ಸ್ವಲ್ಪ ನಾಚಿ ಹೌದೆಂದು ತಲೆ ಹಾಕಿದಳು – "ಇವನು ಯಾರು ? ಯಾರ ಮಗ ? ಏನು ಹೆಸರು ? – ಇದು ನಿನಗೆ ಗೊತ್ತೆ" ? ಎಂದು ಪ್ರಶ್ನಿಸಿದಳು.

"ಇವನು ಸಿರಿರಮಣ, ದ್ವಾರಕಾಧೀಶನ ಮೊಮ್ಮಗ. ಅನಿರುದ್ಧ ಎಂದು ಇವನ ಹೆಸರು" ಎಂದು ಚಿತ್ರಲೇಖೆ ಪರಿಚಯಿಸಿದಳು.

ಉಷೆಯು ತನ್ನ ಕೃತಜ್ಞತೆಯನ್ನು ಸೂಚಿಸುತ್ತಾ ತನ್ನ ಸಖಿಯನ್ನು ಬಿಗಿದಪ್ಪಿಕೊಂಡಳು. ಅಂದೇ ರಾತ್ರಿ ಆತನನ್ನು ಕರೆದು ತರುವುದಾಗಿ ಆಶ್ವಾಸನೆಯನ್ನಿತ್ತು ಚಿತ್ರಲೇಖೆ ದ್ವಾರಕೆಗೆ ಹೊರಟು ಬಿಟ್ಟಳು. ಹರ ಪಾರ್ವತಿಯರಿಗೆ ಹರಕೆ ಹೊತ್ತಳು. ಉಷೆಯು ತನ್ನ ಸೌಧವನ್ನು ಶೃಂಗರಿಸಿದಳು. ತನ್ನ ಶಯನಾಗಾರವನ್ನು ಅನೋಘರೀತಿಯಲ್ಲಿ ಅಲಂಕರಿಸಿದಳು. ಕುಸುಮಶರನೂ ಅದನ್ನು ನೋಡಿ ವ್ಯಾಮರೆಯುವಂತಿತ್ತು. !

ಇತ್ತ ಚಿತ್ರಲೇಖೆ ದ್ವಾರಕಾವತಿಗೆ ಬಂದಳು. ಶ್ರೀ ಕೃಷ್ಣನ ಚಕ್ರವನ್ನು ಕಂಡು ಭಕ್ತಿಭಾವದಿಂದ ನಮಿಸಿ ಸ್ತುತಿಸಿದಳು. ಅದರ ಅನುಮತಿಯನ್ನು ಪಡೆದು ಪುರದೊಳಗೆ ಪ್ರವೇಶಿಸಿ, ದ್ವಾರಕಾಧೀಶನ ಅರಮನೆಗೆ ಹೋದಳು. ಅಲ್ಲಿ ಅನಿರುದ್ಧದೇವನ ಶಯನಾಗಾರವನ್ನು ಹೊಕ್ಕು ನೋಡುತ್ತಾಳೆ — ಅವನು ಮಂಚದ ಮೇಲೆ ಮೂರ್ಛಿತನಂತೆ ಮಲಗಿದ್ದಾನೆ. ಸುತ್ತಲೂ ಸೌಂದರ್ಯ ಶಿಖಾಮಣಿಗಳಂತಿರುವ ಪ್ರಮದೆಯರು ಕುಳಿತಿದ್ದಾರೆ ! ಆದರೆ ಅವಳ ಸೂಕ್ಷ್ಮದೃಷ್ಟಿಯು ಅನಿರುದ್ಧನ ಮುಖ ಬಾಡಿರುವುದನ್ನು ಗುರುತಿಸಿತು. ಮತ್ತು ಅವನೂ ಸಹ ಪೂರ್ವರಾಗ ಪೀಡಿತನೆಂದು ಗಮನಿಸಿತು.

ಚಿತ್ರಲೇಖೆಯು ತನ್ನ ಮಾಯಾಶಕ್ತಿಯಿಂದ ಆ ಪ್ರಮದೆಯರನ್ನು ಸಮ್ಮೋಹನಾಸ್ತ್ರದಿಂದ ಬಿಗಿದು ಅನಿರುದ್ಧನನ್ನು ಎಚ್ಚರಿಸಿದಳು. ಅವಳ ಊಹೆ ಸರಿಯಾಗಿತ್ತು. ಅವನ ಪೂರ್ವರಾಗವನ್ನರಿತು ಉಷೆಯ ಚಿತ್ರವನ್ನು ತೋರಿಸಿದಳು. ಅವಳ ಸಮಾಗಮ ಮಾಡಿಸುವ ಆಶ್ವಾಸನೆಯನ್ನಿತ್ತು ತನ್ನ ಮಂತ್ರಶಕ್ತಿಯಿಂದ ಅವನೊಡನೆ ಗಗನಗಾಮಿನಿಯಾಗಿ ಬಾಣಾಸುರನ ಅರಮನೆಯ ಅಂತಃಪುರದೊಳಗೆ ಅವನನ್ನು ತಂದಿಳಿಸಿದಳು. ಅಲ್ಲಿ

ಉತ್ಕಂಠಿತಳಾಗಿ ಕುಳಿತಿದ್ದ ಉಷೆ ಅವನನ್ನು ಗಾಂಧರ್ವವಿಧಿಯಂತೆ ವರಿಸಿದಳು. ಯಾರ ಅಂತಃಪುರದಲ್ಲಿ ಪುರುಷರ ಪ್ರವೇಶವಂತಿರಲಿ, ಗಂಡು ನೊಣವೂ ನುಸುಳಿ ಬರುವುದು ಅಸಾಧ್ಯವಾಗಿತ್ತೋ ಅದೇ ಅಂತಃಪುರದಲ್ಲಿ ಉಷಾ–ಅನಿರುದ್ಧರ ಕೇಲಿಕ್ರೀಡೆ ಅಬಾಧಿತ ರೀತಿಯಲ್ಲಿ ನಡೆಯತೊಡಗಿತು.

ಕೆಲವು ಕಾಲದ ನಂತರ ಬಾಣಾಸುರನಿಗೆ ಈ ವಿಷಯ ತಿಳಿಯಿತು. ಒಮ್ಮೆ ನಾರದರು ಅಸುರೇಶ್ವರನ ಸಭೆಗೆ ದಯಮಾಡಿಸಿದರು. ಅವನ ಕುಲ ಶೀಲಾದಿಗಳನ್ನೆಲ್ಲಾ ಹೊಗಳಿದರು. ಅನಂತರ 'ಏನಪ್ಪ ಅನ್ಯಾಯ ! ಅಂಥ ನೀನು ನಿನ್ನ ಅಂತಃಪುರವನ್ನು ವೇಶ್ಯಾವಾಟಿಕೆಯನ್ನಾಗಿ ಮಾಡಿಬಿಟ್ಟಿರುವೆಯಲ್ಲ !' ಎಂದು ಉದ್ಗರಿಸಿದರು.

ಈ ಮಾತುಗಳನ್ನು ಕೇಳಿದೊಡನೆಯೇ ಬಾಣಾಸುರನಿಗೆ ತಡೆಯಲಾರದಷ್ಟು ಕೋಪ ಬಂದಿತು. ನಾರದರು ಮೆಲುದನಿಯಲ್ಲಿ ಸಮಾಧಾನ ಹೇಳುತ್ತಾ "ನಿನ್ನ ಕುಮಾರಿಯೇ ಅಂತಃಪುರಕ್ಕೆ ಅಸುರವೈರಿ ಶ್ರೀಕೃಷ್ಣನ ಮೊಮ್ಮಗನನ್ನು ಬರಮಾಡಿಕೊಂಡು ತನ್ನ ತನುಮನಗಳನ್ನು ಅವನಿಗೊಪ್ಪಿಸಿಬಿಟ್ಟಿದ್ದಾಳೆ ! ಈಗ ಏನು ಮಾಡುವೆ ಹೇಳು ? ಹೇಗೂ ನಿನ್ನ ಮಗಳನ್ನು ವರಿಸಿಬಿಟ್ಟಿದ್ದಾನೆ. ಅವನನ್ನು ಶಿಕ್ಷಿಸಲು ಹೋದರೆ ದೈತ್ಯಾರಿಯೊಡನೆ ಯುದ್ಧ ಅನಿವಾರ್ಯವಾದೀತು. ಇಡೀ ಯಾದವ ಕುಲವೇ ಮೇಲೇರಿ ಬರಬಹುದು. ಸುಮ್ಮನೆ ದುಡುಕ ಬೇಡ. ಸಂಧಿಮಾಡಿಕೊ" ಎಂದು ಸಲಹೆಯನ್ನಿತ್ತರು.

ಬಾಣಾಸುರನಿಗೆ ಈ ಸಲಹೆ ಹಿಡಿಸಲಿಲ್ಲ. ಅವನು ತನ್ನ ಹಿರಿಯ ಮಂತ್ರಿ ಕುಂಭಾಂಡನೊಡನೆ ವಿಚಾರ ಮಾಡಿದ. ಕುಂಭಾಂಡನು ತನ್ನ ಪ್ರಭುವಿಗೆ ಸಂತೋಷವನ್ನುಂಟುಮಾಡಲು ಹೇಳಿದ – "ಪ್ರಭು ! ನೀವು

ಹೇಳಿದಂತೆ ಅವನು ಸ್ತ್ರೈಣ. ಶ್ರೀಕೃಷ್ಣನ ಮೊಮ್ಮಗ. ಕಾಮನ ಕುಮಾರ. ನಮ್ಮ ಕುಮಾರಿಗೆ ತಕ್ಕ ವರನಲ್ಲ. ಅವನು ನಿಮ್ಮ ಅಳಿಯನಾಗಲು ಯೋಗ್ಯನಲ್ಲ. ಆದಾಗ್ಯೂ ಮೊದಲು ಆ ಅಂತಃಪುರವಾಸಿಯನ್ನು ಸೆರೆ ಹಿಡಿದು ತರಲು ನನಗಪ್ಪಣೆ ಮಾಡಿ. ಅನಂತರ ನೀವು ಯಥಾಯೋಗ್ಯ ನಿರ್ಣಯವನ್ನು ಕೈಗೊಂಡರಾಯಿತು"

ಗುಪ್ತಚರರಿಂದ ಚಿತ್ರಲೇಖೆ ಈ ಎಲ್ಲ ಸಮಾಚಾರವನ್ನೂ ಕೇಳಿ ಖಿನ್ನಳಾದಳು. ತನ್ನ ಸಖಿಯ ಸಂತೋಷಕ್ಕಾಗಿ ಏನು ಮಾಡಲೂ ಸಿದ್ಧಳಾದಳು. ಅನಿರುದ್ಧನನ್ನು ಬಚ್ಚಿಡಬೇಕೆಂದು ಹವಣಿಸಿದಳು. ಆದರೆ ಕುಮಾರನು ಆ ಹೆಂಗಳೆಯರಿಬ್ಬರಿಗೂ ಸಮಾಧಾನ ಹೇಳಿ, ಯುದ್ಧ ಮಾಡುವುದಾಗಿ ನಿರ್ಣಯಿಸಿದ. ವಿವಶಳಾದ ಚಿತ್ರಲೇಖೆಯು ತಾನು ಪಡೆದಿದ್ದ ಮಂತ್ರ ಶಕ್ತಿಯನ್ನೆಲ್ಲಾ ಅವನಿಗೆ ಉಪದೇಶಿಸಿದಳು.

ಅನಿರುದ್ಧ ಕುಂಭಾಂಡರ ಯುದ್ಧ ಆರಂಭವಾಯಿತು. ಕುಂಭಾಂಡನನ್ನೂ ಅಸುರ ಸೇನೆಯನ್ನೂ ಸಂಹರಿಸಿದ ಅನಿರುದ್ಧನು ಹರ್ಷೋಲ್ಲಾಸದಿಂದಿರುವಾಗ, ಪ್ರಾಣವನ್ನುಳಿಸಿಕೊಂಡು ರಣರಂಗದಿಂದ ನುಸುಳಿ ಹೋದ ಭಟನೊಬ್ಬನು ಬಾಣಾಸುರನನ್ನು ಕಂಡು, ಅಭಯ ಪಡೆದು ಹೇಳಿದ – "ಪ್ರಭೋ, ಆ ಅಂತಃಪುರವಾಸಿಯು ಸುಂದರ ಸುಕುಮಾರನಷ್ಟೇ ಅಲ್ಲ. ಕೇವಲ ಲಂಪಟನಲ್ಲ. ಮಹಾ ಪರಾಕ್ರಮಿ. ಅವನ ಯುದ್ಧ ಕೌಶಲವನ್ನು ಕುರಿತು ಏನು ಹೇಳಲಿ ? ಕುಂಭಾಂಡರು ಇನಿಲ್ಲ" ಎಂದನು.

"ಅಂದರೆ ಆ ವೀರಾಧಿವೀರ ಪುಂಡರೀಕಾಕ್ಷನ ಮೊಮ್ಮಗನೊಡನೆ ಸೆಣಸಲು ನಾನೇ ಹೋಗಬೇಕಲ್ಲವೆ ?" ಎಂದು ಸಹಸ್ರಬಾಹುವು ಎದ್ದು

ಹೊರಟ. ಆ ಫಾಲಾಕ್ಷನ ಕೃಪೆಯಿಂದಲೇ ಈ ಯುದ್ಧ ಒದಗಿ ಬಂದಿರ ಬಹುದೆಂದು ಭಾವಿಸಿದ. ಘೋರಯುದ್ಧ ಆರಂಭವಾಯಿತು. ಮತ್ತಗಜಗಳ ಮಧ್ಯೆ ಸಿಂಹಶಾವಕನಂತೆ ಏಕಾಕಿಯಾಗಿ ಅನಿರುದ್ಧ ಹೋರಾಡುತ್ತಿದ್ದ. ಸಹಸ್ರಬಾಹುವು ಅವನ ಸ್ಥೈರ್ಯ ಸಾಹಸಕ್ಕೆ ತಲೆದೂಗಿದ. ಉಷೆ ಇವನ್ನೆಲ್ಲಾ ನೋಡುತ್ತಿದ್ದಳು. ಅವಳ ಸಂಕಟ ವರ್ಣನಾತೀತ. ಯಾರ ಗೆಲುವಿಗೆ ಹರಕೆ ಹೊರಬೇಕು ? ಚೂರಿಯು ಇರಿತ ಕಣ್ಣಿಗೆ ಬಿದ್ದರೇನು ? ಕರುಳಿಗೆ ಬಿದ್ದರೇನು ? ಎಂದು ಶೋಕ ಕಾತರಳಾದಳು.

ಇತ್ತ ಕುಮಾರ ಮೂರ್ಛಿತನಾದ. ಬಾಣಾಸುರನು ಅವನನ್ನು ಎತ್ತಿಕೊಂಡ. ಇದನ್ನು ಕಣ್ಣಾರೆ ಕಂಡ ಉಷೆ ಚಿಟ್ಟನೆ ಚೀರಿ ಮೂರ್ಛಿತಳಾದಳು. ಅಂತಃಪುರದ ಸಖಿಯರು ರೋಧಿಸ ತೊಡಗಿದರು. ದೈತ್ಯೇಂದ್ರನು ಯೋಚಿಸಿದ – 'ಇವನನ್ನು ಕೊಂದುಬಿಡಬಹುದು. ಆದರೆ ನನ್ನ ಮಗಳ ಗತಿಯೇನು ? ಬಿಟ್ಟು ಬಿಡಲೆ ? – ಸರಿಯಲ್ಲ. ಅದೂ ಉಚಿತವಲ್ಲ, ಏನು ಮಾಡಲಿ, ಎಂದು ಡೋಲಾಯಮಾನನಾದ. ಅವನ ಅಂತಃಕರಣವು ವಾತ್ಸಲ್ಯಕ್ಕೆ ಮಾರುಹೋಯಿತು. ದೈತ್ಯವೀರನು ಪುತ್ರಿಯ ಬಳಿ ಹೋಗಿ "ಹೆದರ ಬೇಡ. ನಾನು ಇವನನ್ನು ಕೊಲ್ಲುವುದಿಲ್ಲ ಶಿವನಾಣೆ" ಎಂದು ಹೇಳಿ ಅವನನ್ನು ಎತ್ತಿಕೊಂಡು ಬಂದು ಅರಮನೆಯಲ್ಲಿ ಕುಳಿತಿದ್ದ ನಾರದರೆದುರಿನಲ್ಲಿ ಮಲಗಿಸಿದನು.

"ನಾರದರೆ ! ಈಗ ಈ ಮದನ ಕುಮಾರನನ್ನೇನು ಮಾಡಲಿ ? ಅಪ್ಪಣೆಯಾಗಲಿ."

"ದ್ವಾರಪಾಲಕನಾಗಿರುವ ಶಿವನನ್ನು ಕೇಳು ; ಅವನು ಹೇಳಿದಂತೆ ಮಾಡು."

"ಅಸುರಾಧಿಪತಿ ! ಏನು ಮಾಡುವುದಾದರೂ ಪೂರ್ವಾಪರ ವಿಚಾರ ಮಾಡಿ, ಮಾಡು." ಎಂದು ಪುರಹರನು ಹೇಳಿದನು.

"ಈತನನ್ನು ಸೆರೆಯಲ್ಲಿಟ್ಟರೆ ಯದುನಾಥನಾದ ನಾರಾಯಣನೊಂದಿಗೆ ಯುದ್ಧ ಮಾಡಬೇಕಾಗುವುದು."

"ಅಹುದು. ಚಕ್ರಪಾಣಿಯು ಸದಾ ಅಜೇಯ. ಅವನೊಡನೆ ಸಮರವೆಂದರೆ ಪರಿಣಾಮವೇನೆಂದು ಹೇಳಬೇಕೆ?" ಶಿವನು ತನ್ನ ಭಕ್ತನನ್ನು ಎಚ್ಚರಿಸಿದನು.

ಆದರೆ ದೈತ್ಯವೀರನು ಶಪಥ ಪೂರ್ವಕ ಹೇಳಿದ :-

"ಶಂಕರ, ಸರ್ವೋತ್ತಮ, ಘೋರದುರಿತ ಭಯಂಕರ, ನಿನ್ನಾಣೆ. ನಿನ್ನೆದುರಿನಲ್ಲಿ ಆ ಪುಂಡರೀಕಾಕ್ಷನನ್ನು ಗೆಲ್ಲುವೆ. ಇಲ್ಲವಾದಲ್ಲಿ ನಾನು ನಿನ್ನ ಕಿಂಕರನೆನಿಸಿಕೊಳ್ಳಲು ಅರ್ಹನಲ್ಲ."

'ಇವನು ಮನಸ್ಸಿಗೆ ಬಂದಂತೆ ಮಾಡುವವನೇ ಹೊರತು ನಮ್ಮ ಮಾತು ಕೇಳುವವನಲ್ಲ. ಅಚ್ಯುತನ ಚಿತ್ತಕ್ಕೆ ಬಂದಂತಾಗಲಿ' ಎಂದು ಮನಸ್ಸಿನಲ್ಲಂದುಕೊಂಡು ಅಸುರೇಶ್ವರನಿಗೆ ಆಶೀರ್ವದಿಸಿ ಶಿವ ಹೊರಟು ಹೋದ.

ಇತ್ತ ಕುಮಾರನಿಗೆ ಅಭಯವನ್ನಿತ್ತು ಬಾಣಾಸುರನು ನಾರದರಿಗೆ ನಮಸ್ಕರಿಸಿದನು. ನಾರದರು ನಾರಾಯಣನ ನಾಮಸ್ಮರಣೆ ಮಾಡುತ್ತಾ ಮೇಲೆದ್ದು ಬಾಣಾಸುರನಿಗೆ ಆಶೀರ್ವದಿಸಿ ನೇರವಾಗಿ ದ್ವಾರಾವತಿಗೆ ಬಂದರು.

ನಾರದರಿಂದ ಅನಿರುದ್ಧನು ಯುದ್ಧ ಬಂದಿಯಾಗಿರುವನೆಂಬುದನ್ನು ತಿಳಿದೊಡನೆಯೇ ಶ್ರೀಕೃಷ್ಣನು ಬಲರಾಮ, ಸಾತ್ಯಕಿ ಕೃತವರ್ಮನೇ ಮುಂತಾದ ಯದುವೀರರೊಂದಿಗೆ ಸೇನಾ ಸಹಿತನಾಗಿ ಶೋಣಿತಪುರವನ್ನು ಕುರಿತು ಹೊರಟನು. ಗರುಡದೇವನ ಸಹಾಯದಿಂದ ಎಲ್ಲರೂ ನಗರದ ಹೊರಗೆ ಬಂದಿಳಿದರು. ಹೆಚ್ಚುಕಾಲ ಹಿಡಿಯಲಿಲ್ಲ. ತಮ್ಮ ಶಿಬಿರ ರಚನೆ ಯಾದೊಡನೆಯೇ ಶ್ರೀಕೃಷ್ಣನು ಶಿವನಿಗೆ ಸಂದೇಶವನ್ನು ಕಳಿಸಿಕೊಟ್ಟನು. ನಾರದರು ರಾಯಭಾರ ಹೊತ್ತು ತೆರಳಿದರು. "ನಿನ್ನ ಶಿಷ್ಯನಿಗೆ ಹೇಳು– ನನ್ನ ಮೊಮ್ಮಗ ಮತ್ತು ಅವನ ಪ್ರೇಯಸಿ ಉಷೆಯನ್ನು ನಮಗೊಪ್ಪಿಸಲಿ. ವ್ಯರ್ಥ ರಕ್ತಪಾತ ಬೇಡ" ಎಂದು. ನಾರದರು ಕೃಷ್ಣನ ಸಂದೇಶವನ್ನು ತಿಳಿಸಿದರು.

"ನಾರದರೆ, ಒಮ್ಮೆ ನಿಮ್ಮೆದುರಿನಲ್ಲಿ ಈ ವಿಷಯ ಹೇಳಿದ್ದಾಗಿದೆ. ಆ ಮೂರ್ಖ ಯಾರ ಮಾತನ್ನೂ ಕೇಳುವವನಲ್ಲ. ಆದರೂ ಅಚ್ಯುತನ ಆಜ್ಞೆ ಮೀರುವಂತಿಲ್ಲ. ಹೇಳುತ್ತೇನೆ. ಹೇಗೂ ಅವನ ಚಿತ್ತಕ್ಕೆ ಬಂದದ್ದು ತಾನೆ ಆಗುವುದು !"

ಶಿವನ ದೂತರು ಬಾಣಾಸುರನಿಗೆ ಸಂಧಿಮಾಡಿಕೊಳ್ಳುವಂತೆ ತಿಳಿಸಿದರು. ಮುರಹರ ಹಾಗೂ ಪುರಹರನ ಸಂದೇಶವನ್ನು ಕೇಳಿದ ಬಾಣಾಸುರ ಭೇದ ನೀತಿಗೆ ಶರಣುಹೋಗಿ ಅದೇ ದೂತರ ಮೂಲಕ ಶಿವನಿಗೆ ಹೇಳಿ ಕಳಿಸಿದ – "ನಿನಗೆ ಕೋಟಿ ಕೋಟಿ ನಮಸ್ಕಾರಗಳು. ನಿನ್ನ ಭಕ್ತರನ್ನು ಸಂಹರಿಸುವ ಈ ವಾಸುದೇವನೊಂದಿಗೆ ಮೈತ್ರಿಯೆ ? ಅವನು ಕಪಟಿ, ಯಾವ ಹೊತ್ತಿನಲ್ಲಿ ಏನು ರೂಪ ಧರಿಸಿ ದೈತ್ಯ ಕುಲವನ್ನು ಸಂಹರಿಸುವನೆಂದು ಹೇಳಲು ಬಾರದು. ಮತ್ಸ್ಯ, ಕೂರ್ಮ, ವರಾಹಾದಿ ರೂಪಗಳನ್ನು ಧರಿಸಿ ಅವನು ಮಾಡಿರುವುದೆಲ್ಲ ಜಗಜ್ಜಾಹಿರವಾಗಿದೆ. ಅವನೊಡನೆ ಮೈತ್ರಿ ಉಚಿತವೆ ?" ಎಂದು.

ಆಗ ಮಂತ್ರಿಗಳ ಹೇಳಿದರು–"ದೈತ್ಯೇಂದ್ರ ! ಈಗ ಮದನಾರಿಯ ಸಲಹೆಯನ್ನು ಅಂಗೀಕರಿಸಿ ನಡೆಯಿರಿ. ಇದರಿಂದ ಹರಿಹರರಿಬ್ಬರ ಪ್ರೀತಿಗೂ ಪಾತ್ರರಾಗುವಿರಿ ಕನ್ಯೆ ಎಂದಿದ್ದರೂ ಪರರ ಸೊತ್ತು. ನಿಮ್ಮ ಮಗಳು ತನ್ನ ಮನವೊಪ್ಪುವ ವೀರನನ್ನು ಆರಿಸಿಕೊಂಡಿದ್ದಾಳೆ. ಅವಳನ್ನು ಅಳಿಯ ನೊಂದಿಗೆ ಬೀಳ್ಕೊಡಿ. ಇದರಿಂದ ಯದುಕುಲ ದನುಜಕುಲಗಳ ಮೈತ್ರಿ ಸಂವರ್ಧಿಸುವುದು ಮುಕುಂದನ ಭಕ್ತಿ ಮಾರ್ಗದ ಕಂಟಕ ದೂರವಾಗು ವುದು. ಇಹದಲ್ಲಿ ಕೀರ್ತಿಗೂ ಪರದಲ್ಲಿ ಸದ್ಗತಿಗೂ ತಾವು ಪಾತ್ರ ರಾಗುವಿರಿ."

ಆದರೆ ಬಾಣಾಸುರನು ತನ್ನ ಪಟ್ಟು ಬಿಡಲಿಲ್ಲ. ಯುದ್ಧವನ್ನು ಘೋಷಿಸಿದ

ಬಾಣಾಸುರನ ಭಕ್ತಿಪಾಶದಲ್ಲಿ ಕಟ್ಟುಬಿದ್ದ ಶಿವ ವಿಷ್ಣುವಿನೊಡನೆ ಸೆಣ ಸಲು ರಣರಂಗಕ್ಕಿಳಿಯಬೇಕಾಯಿತು. ಹರಿ–ಹರರ ಯುದ್ಧ ! ಮೂರು ಲೋಕವು ನಡುಗಿ ಹೋಯಿತು. ಅಶರೀರವಾಣಿಯು ಮೊಳಗಿತು–ಶಿವನು ತ್ರಿಶೂಲವನ್ನೆತ್ತಿಕೊಂಡಾಗ ಯಾರು ತಾನೆ ಬಲಿಯಾಗದೆ ಉಳಿಯಲು ಸಾಧ್ಯ ! ಅಂತೆಯೇ ಕೇಶವನ ಅಮೋಘ ಚಕ್ರವು ಹೊರಟಿತೆಂದರೆ ಯಾರು ತಾನೆ ಉಳಿದಾರು ? ಸಾಕು, ಈ ಲೋಕ ನಾಶಕ ಯುದ್ಧ" ಎಂದು

ಯುದ್ಧವನ್ನು ನಿಲ್ಲಿಸಿದರು. ಉಭಯರ ಮೇಲೂ ಪುಷ್ಪ ವೃಷ್ಟಿ ಯಾಯಿತು. ವಿನಾಶದ ದವಡೆಯಿಂದ ಪಾರಾದ ಆನಂದದಲ್ಲಿ ಜಗತ್ತು ನೆಮ್ಮದಿಯಿಂದ ಉಸಿರಾಡತೊಡಗಿತು.

ಶಿವನು ಶಸ್ತ್ರನ್ಯಾಸ ಮಾಡಿ ಋತುಪರ್ಣವನಕ್ಕೆ ತೆರಳಿದರೂ ಬಾಣಾ ಸುರನು ಯುದ್ಧವನ್ನು ನಿಲ್ಲಿಸಲಿಲ್ಲ. ತಾನೇ ರಣಕ್ಕೆ ಧುಮುಕಿದನು. ಆಗ

ಎಲ್ಲೆಡೆ ಅಪಶಕುನಗಳಾದವು ಯಾವುದನ್ನೂ ಲೆಕ್ಕಿಸದೆ ಬಲಿಪುತ್ರನು ಅಚ್ಯುತ ನೆದುರಿನಲ್ಲಿ ನಿಂತು ಘೋಷಿಸಿದ :–

"ಹೇ ಯದುಕುಲೋತ್ತಮ ! ಸಮರ ಭೂಮಿಯಿಂದ ಓಡಿಹೋಗ ಬೇಡ. ನೋಡು, ಈ ಬಾಣನು ಏನು ಮಾಡುವುನೆಂಬುದನ್ನು ಈ ಜಗತ್ತು ನೋಡಲಿ" ಎಂದು.

ಆಕಾಶದಲ್ಲಿ ಅವಿತು ಬಾಣಾಸುರ ಬಾಣದ ಸುರಿಮಳೆಗರೆದ. ಪೀತಾಂಬರ ಧಾರಿಯು ಭೂಮಿಯ ಮೇಲೆ ನಿಂತಿದ್ದು ಪ್ರತಿಯೊಂದನ್ನೂ ತುಂಡರಿಸಿ ಹಾಕಿದ. ವಿಷ್ಣುಚಕ್ರವು ಮುನ್ನುಗ್ಗಿ ಬಾಣಾಸುರನ ಒಂಭೈ ನೂರ ತೊಂಬತ್ತೆಂಟು ಕೈಗಳನ್ನು ಕತ್ತರಿಸಿ ಹಾಕಿತು. ಇನ್ನೆರಡು ಬಾಹು ಗಳೂ ತುಂಡುತುಂಡಾಗಿ ಬೀಳಬಹುದಿತ್ತು ಅಷ್ಟರೊಳಗೆ ಭಕ್ತವತ್ಸಲನಾದ ಶಿವನು ಬಾಣಾಸುರನ ಪರವಾಗಿ ಪ್ರಾಣಭಿಕ್ಷೆಯನ್ನು ಬೇಡಿ ಪಡೆದನು.

ಯುದ್ಧ ನಿಂತಿತು ಉಷಾ ಅನಿರುದ್ಧರನ್ನು ಸಮ್ಮಾನ ಸಹಿತ ಯಾದ ವರ ಶಿಬಿರಕ್ಕೆ ಕಳಿಸಲಾಯಿತು. ಬಹಳ ವೈಭವದಿಂದ ಅವರಿಬ್ಬರ ವಿವಾಹ ಮಹೋತ್ಸವವು ನೆರವೇರಿತು. ಬಾಣಾಸುರನು ವರದಕ್ಷಿಣೆ ಹಾಗೂ ವರೋ ಪಚಾರಗಳನ್ನಿತ್ತು ಸತ್ಕರಿಸಿದನು. ಯಾದವರು ಹೊರಲಾರದಷ್ಟು ಧನ ಕನಕಾದಿಗಳನ್ನು ಕೊಟ್ಟಿದ್ದನು.

ಯುದ್ಧಕ್ಕೆ ಹೊರಟ ದಂಡು ದಿಬ್ಬಣವಾಗಿ ಮರಳಿತು. ಮೊಮ್ಮಗ ಹಾಗೂ ಸೊಸೆಯೊಡನೆ ಮರಳಿ ಬಂದ ಶ್ರೀಕೃಷ್ಣನಿಗೆ ಅದ್ಭುತ ಸ್ವಾಗತ ಸತ್ಕಾರಗಳಾದವು. ದ್ವಾರಕಾ ನಗರಿಯಲ್ಲಿ ರಣಭಯಂಕರ ಅನಿರುದ್ಧನನ್ನು

ಹಾಗೂ ಲಾವಣ್ಯನಿಧಿಯಾದ ಉಷೆಯನ್ನು ರುಕ್ಮಿಣಿ ಅಂತಃಪುರಕ್ಕೆ ಬರಮಾಡಿಕೊಂಡಳು. ನಾರದಾದಿಗಳಿಗೆ ಅಭಿವಂದಿಸಿದಳು. ಲೋಕಮಂಗಲಕಾರಿಯಾದ ಶ್ರೀ ಕೃಷ್ಣನನ್ನು ಸ್ತುತಿಸಿ ಆನಂದ ತುಂದಿಲರಾದರು. ಬಾಣಾಸುರನ ಕೀರ್ತಿ ಚಂದ್ರಿಕೆ ಲೋಕದಲ್ಲೆಲ್ಲ ಪಸರಿಸಿತು.



# ದಾಸರ ಸಾಹಿತ್ಯ ಕೃತಿಗಳು-೩

## ರಾಮಧಾನ್ಯ ಚರಿತೆ

ರಾಮಧಾನ್ಯ ಚರಿತೆ ಎಂಬ ಕನಕದಾಸರ ಕಲ್ಪನೆಯ ಖಂಡ ಕಾವ್ಯ. ವ್ರೀಹಿ ಮತ್ತು ನರದೆಲಗ ಅಂದರೆ ಅಕ್ಕಿ ಮತ್ತು ರಾಗಿಯ ಸತ್ವ ನಿರೂಪಣೆಗಾಗಿ ಶ್ರೀರಾಮನ ನಿರ್ಣಯದ ಪ್ರಸಂಗವನ್ನು ಕಲ್ಪಿಸಿಕೊಂಡು ಒಂದು ವ್ಯಂಗ್ಯ ಕಾವ್ಯವನ್ನು ರಚಿಸಿದ್ದಾರೆ. ಇದರಲ್ಲಿ ವ್ರೀಹಿ ಅಂದರೆ ಅಕ್ಕಿ ತನ್ನ ಶ್ರೇಷ್ಠತೆಯನ್ನು ಹೇಳಿಕೊಂಡು ರಾಗಿಯನ್ನು 'ನೀಚ ಯಜ್ಞಾದಿ ಉತ್ತಮ ಕಾರ್ಯಕ್ಕೆ ಅನರ್ಹ' ಎಂದು ಹಳಿಯುತ್ತದೆ. ಆದರೆ ರಾಗಿ ಗಂಭೀರವಾಗಿ ಉತ್ತರಿಸುತ್ತದೆ. ತನ್ನ ಸತ್ವದ ಬಗ್ಗೆ ಸರ್ವರಿಂದಲೂ ಮಾನ್ಯತೆ ಪಡೆಯುತ್ತದೆ. ಆದರೂ ಲಜ್ಜೆಯಿಂದ ಮ್ಲಾನ ಮುಖನಾದ ವ್ರೀಹಿಯನ್ನು ಸಮಾಧಾನಗೊಳಿಸಿ ಗೌರವದಿಂದ ನಡೆದುಕೊಳ್ಳುತ್ತದೆ. ಹೀಗೆ ಉಚ್ಚವರ್ಗದವರ ಪೊಳ್ಳು ಅಗ್ಗಳಿಕೆಯನ್ನೂ ನೀಚರೆಂದು ಪರಿಗಣಿಸಲಾಗುವವರ ಔದಾರ್ಯಾದಿ ಸದ್ಗುಣಗಳ ಸಮರ್ಥನೆಯನ್ನೂ ಮಾಡಿ ಕನಕದಾಸರು ಒಂದು ಹೊಸ ಕಾವ್ಯ ಶೈಲಿಯ ಪ್ರವರ್ತಕರಾಗಿದ್ದಾರೆ. ಆದರೂ ಇಂತಹ ಕಾವ್ಯಗಳ ಪರಂಪರೆ ನಡೆದು ಬರುವುದು ಕಷ್ಟವಲ್ಲವೆ ? ಇದರ ಅನುಕರಣೆ ಸಾಧ್ಯವಿಲ್ಲವಷ್ಟೆ !

ಈ ಕೃತಿಯಲ್ಲಿ 157 ಭಾಮಿನೀ ಷಟ್ಪದಿಗಳಿವೆ ಕವಿಯು ಧರ್ಮರಾಜ ಹಾಗೂ ಶಾಂಡಿಲ್ಯ ಮಹರ್ಷಿಗಳ ಸಂಭಾಷಣೆಯಲ್ಲಿ ಮೂಡಿಬಂದುದಾಗಿ ಈ ಕಥಾನಕಕ್ಕೆ ಒಂದು ಪೌರಾಣಿಕ ಚೌಕಟ್ಟನ್ನು ಕಲ್ಪಿಸಿಕೊಂಡಿದ್ದಾನೆ. ಖಿನ್ನನಾಗಿ ವನವಾಸದಿಂದ ಪರಿತಪಿಸುತ್ತಿದ್ದ ಧರ್ಮರಾಜನಿಗೆ

ಸಮಾಧಾನ ಹೇಳಲು ಶಾಂಡಿಲ್ಯರು ನಮಗಳಿಗ್ಗೆ ಈ 'ರಾಗೀ ರಾಮಾಯಣ' ವನ್ನು ಹೇಳಿದ್ದಾರೆ.

ವಾರಿಧಿಯ ಬಂಧಿಸಿ, ಸೇನೆಯೊಡನೆ ಲಂಕೆಗೆ ಲಗ್ಗೆ ಇಟ್ಟು, ರಾವಣ ಕುಂಭಕರ್ಣಾದಿ ದಾನವ ವೀರರನ್ನು ಬಾಣ ಪ್ರಹಾರದಿಂದ ಸಂಹರಿಸಿ, ಲಂಕಾ ರಾಜ್ಯವನ್ನು ವಿಭೀಷಣನಿಗೆ ವಹಿಸಿಕೊಟ್ಟ ರಘುನಂದನನು ಪುಷ್ಪಕಾ ರೂಢನಾಗಿ ಅಯೋಧ್ಯೆಗೆ ಮರಳುವಾಗ ದಾರಿಯಲ್ಲಿ ವಾಲ್ಮೀಕಿಗಳ ಆಶ್ರಮಕ್ಕೆ ಬಂದಿಳಿದನು. ಅಲ್ಲಿಂದ ಮುಚುಕುಂದರ ಪಾವನ ಆಶ್ರಮಕ್ಕೆ ತೆರಳಿದನು ಅಲ್ಲಿ ವಿಶ್ವಾಮಿತ್ರ, ಜಮದಗ್ನಿ, ಪರಾಶರ, ಜಹ್ನು, ಜಾಬಾಲ, ಭೃಗು, ಗೌತಮರೇ ಮೊದಲಾದ ಋಷಿವರೇಣ್ಯರು ರಾಮನನ್ನು ಸ್ವಾಗತಿಸಿದರು ; ಸತ್ಕರಿಸಿದರು. ಆಗ ರಾಮಚಂದ್ರನ ವಾಮಭಾಗದಲ್ಲಿ ಸೀತೆ ವಿರಾಜಮಾನ ಳಾಗಿದ್ದಳು. ಅವಳ ವಾಮಭಾಗದಲ್ಲಿ ಹನುಮಂತನೂ ಸುಗ್ರೀವನೂ ಇದ್ದರು. ಶ್ರೀರಾಮನ ದಕ್ಷಿಣ ಭಾಗದಲ್ಲಿ ಲಕ್ಷ್ಮಣ ಮತ್ತು ವಿಭೀಷಣ ರಿದ್ದರು. ಸಮ್ಮುಖದಲ್ಲಿ ಋಷಿಮುನಿ ವೃಂದ ಆಸೀನವಾಗಿತ್ತು. ಹಿಂಬದಿ ಯಲ್ಲಿ ವಾನರ ವೀರರು ನಿಂತಿದ್ದರು. ರಾವಣಾರಿಯ ಯಶೋಗಾನ ನಡೆ ದಿತ್ತು. ಅತಿಥಿಸೇವಾ ಪರಾಯಣರಾದ ಮಹರ್ಷಿಗಳು ಮಧು, ಘೃತದ ಭಾಂಡಗಳನ್ನೂ ಬೆಲ್ಲವನ್ನೂ ವಿವಿಧ ಮೃಷ್ಟಾನ್ನ ಹಾಗೂ ಪಕ್ವಾನ್ನಗಳನ್ನೂ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯಗಳೆಂಬ ಷಡ್ರಸೋಪೇತ ಅನ್ನರಾಶಿಯನ್ನೂ ತಂದು ಶ್ರೀರಾಮನಿಗೆ ಸಮರ್ಪಿಸಿದರು. ಆಗ ಶ್ರೀರಾಮನು ಆ ವಸ್ತು ಗಳನ್ನು ತಾನು ಸ್ವೀಕರಿಸಿ. ಇವುಗಳನ್ನು ರುಚಿ ನೋಡಿ ತಮ್ಮತಮ್ಮ ಅಭಿಪ್ರಾಯವನ್ನು ತಿಳಿಸಲು ತನ್ನ ಅನುಯಾಯಿಗಳಿಗೆ ಹೇಳಿದನು. ವಾನರ ಯೂಥಪರು ಅವುಗಳನ್ನು ಆಸ್ವಾದಿಸಿ, ಬಹಳ ಸ್ವಾದಿಷ್ಟವಾಗಿದೆ, ರುಚಿ ಯಾಗಿದೆ, ಎಂದು ವರ್ಣಿಸಿದರು. ಆದರೆ ಹನುಮನ ಅಭಿಪ್ರಾಯವನ್ನರಿ

ಯಲು ರಾಮನಿಗೆ ಕುತೂಹಲ. ಆಗ ಸುಮ್ಮನಿದ್ದ ಮಾರುತಿಯನ್ನು ಕರೆದು-'ನೀನೂ ರುಚಿ ನೋಡು' ಎಂದು ಆಜ್ಞಾಪಿಸಿದನು. ಹನುಮಂತನು ರುಚಿ ನೋಡಿ, ವಾನರೋತ್ತಮರ ಅಭಿಪ್ರಾಯವನ್ನು ಅನುಮೋದಿಸಿದನು. ಅದರೊಂದಿಗೆ- 'ಪ್ರಭೋ ! ಈ ವಸ್ತುಗಳನ್ನು ಯಾವ ಧಾನ್ಯಗಳಿಂದ ತಯಾರಿಸಿರುವರೊ ಅವುಗಳನ್ನು ತರಿಸಿದರೆ ಅವುಗಳ ಯೋಗ್ಯತೆಯನ್ನು ಪರೀಕ್ಷಿಸಿ ಇವುಗಳ ಬಗ್ಗೆ ಖಚಿತ ಅಭಿಪ್ರಾಯವನ್ನು ಕೊಡಬಹುದು' ಎಂದು ಪ್ರಾರ್ಥಿಸಿಕೊಂಡನು. ರಾಮನ ಆಜ್ಞೆಯಾಯಿತು. ಮುನಿಗಳು ವ್ರೀಹಿ (ಅಕ್ಕಿ) ಗೋಧಿ, ಜ್ವಾಳ, ನರದೆಲಗ (ರಾಗಿ) ಯೇ ಮುಂತಾದ ಧಾನ್ಯಗಳನ್ನು ತಂದು ಮುಂದಿಟ್ಟರು.

ಈ ಧಾನ್ಯಗಳ ರಾಶಿಯನ್ನು ನೋಡಿ, ಹರ್ಷಚಿತ್ತನಾದ ಶ್ರೀರಾಮನು ಇವುಗಳಲ್ಲಿ ಪರಮ 'ಸಾರ ಹೃದಯ' ಯಾವುದು ಎಂದು ಪ್ರಶ್ನಿಸಿದನು. ಒಬ್ಬೊಬ್ಬರು ಒಂದೊಂದು ಧಾನ್ಯವನ್ನು ಹೆಸರಿಸಿದರು. 'ಆಯಿತು. ಯಾವುದಾದರೂ ಒಂದನ್ನು ಹೆಸರಿಸಿ' ಎಂದು ಕೇಳಿದನು. ಆಗ ಮಹರ್ಷಿ ಗೌತಮರು – ನರದೆಲಗ – ಅಂದರೆ ರಾಗಿ ಪರಮ ಸಾರ ಹೃದಯನೆಂದು ಹೇಳಿದರು. ಈ ನಿರ್ಣಯವನ್ನು ಕೇಳಿ ವ್ರೀಹಿ ಸಿಡಿಮಿಡಿಗೊಂಡಿತು. 'ಏನಿದು ಅನ್ಯಾಯ ! ನಾವು ಈ ಸಭೆಯಲ್ಲಿ ಹೀಗೆ ಅಪಮಾನಿತರಾಗಬಹುದೆ ? ಗೋಧಿಯೇ ಮುಂತಾದುವಕ್ಕೆ ಇರದ ಅಗ್ಗಳಿಕೆ ಈ ನೀಚರ ಅನ್ನವಾದ ರಾಗಿಗೆ ಬಂದಿತೆ ? ನನ್ನ ಹೆಸರೇ ಧಾನ್ಯ ಧನ್ಯರಾದುದರಿಂದ-ಅದನ್ನು ಉಪೇಕ್ಷಿಸಿ, ಹೀಗೆ ನರದೆಲಗನನ್ನು ಎತ್ತಿ ಹಿಡಿಯುವುದೆ ? ಅಸಮರ್ಥನೀಯ' ಎಂದು ಬೊಬ್ಬೆ ಇಟ್ಟಿತು.

ಇತರ ಧಾನ್ಯಗಳ ಪಕ್ಷವನ್ನು ವಹಿಸಿ ವ್ರೀಹಿ ಹೋರಾಟದ ಕಣಕ್ಕೆ ಧುಮುಕಿ- 'ಬರಲಿ, ತನ್ನ ಸತ್ವವನ್ನು ತೋರಿಸಲಿ' ಎಂದು ನರದೆಲಗಕ್ಕೆ

ಸವಾಲು ಹಾಕಿತು. ಮತ್ತು ತನ್ನ ಹರಿತ ವಾಗ್ಬಾಣಗಳನ್ನು ಸುರಿಸಲು ಆರಂಭಿಸಿತು.

"ಏ ನರದೆಲಗ! ಏನು ಯೋಗ್ಯತೆ ಇದೆ ಅಂತ ನಮ್ಮ ಹೆಗಲೆಣೆ ಅಂದುಕೊಂಡಿದ್ದೀಯೆ? ನಿನಗೆ ಕುಲವಿಲ್ಲ, ಗೋತ್ರವಿಲ್ಲ, ಶಿಷ್ಟ ಜನ ನಿನ್ನ ಕಡೆ ನೋಡುವುದೇ ಇಲ್ಲ. ಸಮಾಜದಲ್ಲಿ ನಿನಗೇನಿದೆ ಸ್ಥಾನ, ಹೇಳು? ಈಗೇಕೆ ಮತ್ತೆ ನಿರ್ಣಯ? ಎಷ್ಟೋ ಹಿಂದೆಯೇ ಈ ವಿಷಯದಲ್ಲಿ ಜ್ಞಾನಿಗಳು ನಿರ್ಣಯಿಸಿ ಬಿಟ್ಟಿದ್ದಾರೆ. ನೀನು ಶೂದ್ರಾನ್ನ. ಹೀಗಿದ್ದರೂ ಮತ್ತೆ ತಲೆ ಎತ್ತಿ ನಮ್ಮ ಹೆಗಲೆಣೆಯಾಗಿ ನಿಲ್ಲಲು ಯತ್ನವೆ? ಸುಮ್ಮನೆ ತೊಲಗು ಇಲ್ಲಿಂದ."

ಹೀಗೆ, ಆ ದೊಡ್ಡ ಸಭೆಯಲ್ಲಿ ಅದರಲ್ಲೂ ಶ್ರೀರಾಮನೆದುರಿನಲ್ಲೇ ನಿಷ್ಕಾರಣವಾಗಿ ರಾಗಿಯ ಮೇಲೆ ಅಕ್ಕಿ ಎಗರಾಡಿತು.

ಗೌತಮರು ಕೊಟ್ಟ ನಿರ್ಣಯದಿಂದ ಅಕ್ಕಿಗೆ ಮೀರಿಮೀರಿ ಕೋಪ ಬಂದಿತ್ತು. ವಿಷದಂತೆ ಆ ಕೋಪ ಏರುತ್ತಲೇ ಇತ್ತು. ಆದ್ದರಿಂದ ಮತ್ತೆ ರಝಾಡಿಸತೊಡಗಿತು. ಆ ಮಹಾಸಭೆಯ ಎದುರಿನಲ್ಲಿ ತನ್ನ ಅಗ್ಗಳಿಕೆಯನ್ನು ಹೇಳಿಕೊಳ್ಳತೊಡಗಿತು.

"ಕೇಳೋ ಕೇಳು. ಭೂಸುರರ ಉಪನಯನದಲ್ಲಿ, ಸುವ್ರತ ಸುಭೋಜನಗಳಲ್ಲಿ, ಮಂತ್ರಾಕ್ಷತೆ, ಶುಭಶೋಭನಗಳಿಗೆ, ಆರತಿಗೆ, ಕ್ರತುಗಳಲ್ಲಿ ಪ್ರತಿದಿನ ಪ್ರತಿ ಮನೆಯಲ್ಲಿ ಭಗವಂತನಿಗೆ ನೈವೇದ್ಯವಿಡುವಲ್ಲಿ ನಮ್ಮನ್ನು ಬಳಸಲೇಬೇಕು. ಜನಪರ ಭೋಜನಕ್ಕೆ, ಶಿಶುಗಳ ಊಟಕ್ಕೆ, ಬ್ರಾಹ್ಮಣ ಸಂತರ್ಪಣೆಗೆ,ನೆಂಟರಿಷ್ಟರ ಔತಣಕ್ಕೆ, ನಾವಿರಲೇಬೇಕು. ಸತ್ಕಾರ

ಸಮಾರಂಭಗಳಾಗಲಿ, ವಿದ್ಯಾರಂಭದ ಶುಭಲಗ್ನದಲ್ಲಾಗಲಿ, ಹವ್ಯಕವ್ಯಗಳಲ್ಲಾಗಲಿ, ಪೂಜೆ ಪುನಸ್ಕಾರಗಳಲ್ಲಾಗಲಿ, ನಿನಗೆ ಸ್ಥಾನವಿದೆಯೆ ? ಆ ಸಂದರ್ಭಗಳಲ್ಲಿ ನಾವಿಲ್ಲದಿದ್ದರೆ ನಡೆಯುವುದಿಲ್ಲವಷ್ಟೆ ? ನಿನ್ನನ್ನು ಹತ್ತಿರ ಸುಳಿಯಲೂ ಬಿಡುವುದಿಲ್ಲ. ಅಪ್ರಯೋಜಕ. ಅನರ್ಹ. ಅಯೋಗ್ಯ. ಭ್ರಷ್ಟ. ತೊಲಗೊ ಇಲ್ಲಿಂದ.

"ಗೃಹ ಪ್ರವೇಶ ಸಂದರ್ಭದಲ್ಲಿ ಪುಣ್ಯಾಹಕ್ಕೆ, ನವಜಾತ ಶಿಶುವಿಗೆ ರಕ್ಷೆಯನ್ನಿಡುವ ಅಕ್ಷತೆಗೆ, ವಸುಮತೀಶರ ಶಸ್ತ್ರಾಸ್ತ್ರಗಳ ಅರ್ಚನೆಗೆ, ವಿಪ್ರರು ತಲೆಯ ಮೇಲೆ ಆಶೀರ್ವದಿಸಿ ಅಥವಾ ಪೂಜಿಸಿ ಅರ್ಪಿಸುವ ಮಂತ್ರಾಕ್ಷತೆಗೆ ನಾವೇ ಬೇಕಷ್ಟೆ ! ಹೀಗಿದ್ದೂ ನಮ್ಮೊಡನೆ ಸರಿಸಮಾನನೆನ್ನಿಸಿಕೊಳ್ಳುವುದಕ್ಕೆ ಈ ಪ್ರಯತ್ನವೆ ! ಲೆಕ್ಕಕ್ಕೆ ಬಾರದ ವಸ್ತು ನೀನು. ತೊಲಗಾಚೆ."

ಅಕ್ಕಿ ತನ್ನ ಅಗ್ಗಳಿಕೆಯನ್ನು ಸಾರುತ್ತಾ ಮುಂದುವರಿದು ಹೇಳಿತು. "ಏ ! ನಿನಗೇ ಗೊತ್ತಿಲ್ಲ ಭೂಸುರರು ಮಂತ್ರತಂತ್ರಗಳ ಅನುಷ್ಠಾನ ಮುಗಿದ ಮೇಲೆ ನಮ್ಮನ್ನು ತಮ್ಮ ಕರಕಮಲದಲ್ಲಿಟ್ಟುಕೊಂಡು ವೇದ ಮಂತ್ರಗಳಿಂದ ಅಭಿಮಂತ್ರಿಸಿ, ಆಶೀರ್ವಾದಪೂರ್ವಕವಾಗಿ ಬೇರೆಯವರಿಗೆ ಕೊಟ್ಟಾಗ, ಅವರು ನಮ್ಮನ್ನು ತಲೆಯ ಮೇಲಿಟ್ಟುಕೊಳ್ಳುತ್ತಾರೆ. ಅದರಿಂದ ಅವರ ದುರಿತಗಳನ್ನು ದೂರಮಾಡಿ, ಮಂಗಳವನ್ನುಂಟು ಮಾಡುತ್ತೇವೆ. ಅಂಥವರ ಆಯುರಾರೋಗ್ಯಾದಿಗಳನ್ನೂ ಧನಧಾನ್ಯ ಸಂಪದಗಳನ್ನೂ ಹೆಚ್ಚಿಸುವ ಶಕ್ತಿ ಸಂಪನ್ನರೆಂದು ನಮ್ಮನ್ನು ಜನ ಗೌರವಾದರದಿಂದ ನಡೆಸಿಕೊಳ್ಳುತ್ತಾರೆ."

ತನ್ನ ಹಿರಿಮೆಯನ್ನು ಹೇಳಿಕೊಳ್ಳುವುದಕ್ಕೂ ಒಂದು ಮಿತಿ ಬೇಡವೆ ? ವಿನಾಕಾರಣ ಅತಿ ಬಡಬಡಿಸುತ್ತಾ ತನ್ನನ್ನು ತಾನೇ ಹೊಗಳಿಕೊಳ್ಳುತ್ತಲೇ ಇತ್ತು ವ್ರೀಹಿ. ರಾಗಿಯನ್ನು ತಿರಸ್ಕರಿಸುವಲ್ಲಿ ಹಾಗೂ ಅಪಮಾನ ಮಾಡು

ವಲ್ಲಿ ಅದಕ್ಕೆ ತೃಪ್ತಿಯೇ ಇರಲಿಲ್ಲ. ಆದ್ದರಿಂದ ಅದು ಮುಂದುವರಿದು ಕನಿಕರ ದನಿಯಲ್ಲಿ "ಅಯ್ಯೋ ಹುಚ್ಚ! ನಮ್ಮ ಹೆಗಲೆಣೆಯೆ ನೀನು. ಕಾಡು ಕಟ್ಟಿಗೆ ಹಾಗೂ ಶ್ರೀಗಂಧದ ಕಟ್ಟಿಗೆ ಎರಡೂ ಒಂದೇನೆ? ಹಸುವಿನ ಹಾಲು ಕತ್ತೆಯ ಹಾಲು ಎರಡೂ ಸಮಾನವೆ? ನಾನು ಹನುಮಂತನಂತಿದ್ದರೆ ನೀನು ಸಾಮಾನ್ಯ ಕಪಿಯಂತಿರುವೆ. ನಾನು ದೇವಗಂಗೆಯಂತೆ ನೀನೋ ಕೊಚ್ಚೆಯ ಚರಂಡಿ. ನಾನು ಗರುಡ ನೀನು ರಣಹದ್ದು! ನಾನು ಹಂಸ ನೀನು ಬಕ. ನಾನು ಕೋಗಿಲೆ ನೀನು ಕಾಗೆ!"

ಹೀಗೆ ತಾನು ಧನಿಕರ ಅನ್ನವೆಂಬ ಮದದಲ್ಲಿ ಬಡವರ ಅನ್ನವಾದ ರಾಗಿಯನ್ನು ತೆಗಳಿದ್ದೇ ತೆಗಳಿದ್ದು. ಅದೂ ವಿನಾಕಾರಣ ಆ ದೊಡ್ಡ ಸಭೆಯಲ್ಲಿ.

ನರದೆಲಗನೋ ಸಹನಶಕ್ತಿಗೆ ಹೆಸರಾಂತ ವಸ್ತು. ಆದರೆ ಎಷ್ಟು ಅಂತ ಸಹಿಸಲಾದೀತು? ಅದೂ ಆತ್ಮಾಭಿಮಾನವನ್ನು ಒಸಗಿಹಾಕಲು ಹೊರಟಾಗ; ಮೇಲಿಂದ ಮೇಲೆ ಈಮೂದಲಿಕೆಯ ಮೂಸಲವನ್ನು ಎಸೆಯುತ್ತಿದ್ದಾಗ; ಸಹನೆ ಮೀರಿ ಗುಡುಗಿತು. ಸಿಡಿಲಿನಂತೆ ಎರಗಿಬಿತ್ತು–

"ಸಾಕುಮಾಡು! ನಿನ್ನಂತಹ ನಾಚಿಕೆ ಗೆಟ್ಟವನ ಬಾಯಿ ಹತ್ತಬಾರದೆಂದು ಸುಮ್ಮನಿದ್ದೆ. ನಿನಗೆ, ನೀನು ಅಂದರೆ ನಿನ್ನಪ್ಪ ಎಂದು ಜವಾಬು ಕೊಡಬಲ್ಲೆ. ನಿನ್ನ ಪೊಳ್ಳುತನ ನನಗೆ ಗೊತ್ತಿಲ್ಲವೆ? ಅಯ್ಯೋ ನಿನ್ನ ಜಂಬವೆ? ಬಡವರ ಕಡೆ ಕಣ್ಣೆತ್ತಿ ನೋಡದಷ್ಟು ಸೊಕ್ಕು ನಿನಗೆ. ನಿನ್ನ ಅಗ್ಗಳಿಕೆಯ ಅಮಲು ನೆತ್ತಿಗೇರಿಬಿಟ್ಟಿದೆ. ನೀನೇನು ಮಾಡೀಯೆ. ದೊಡ್ಡವರ ಹಿಂದೆ ಹಿಂದೆ ಅಲೆಯುತ್ತೀಯೆ. ಬಾಣಂತಿಯರ ಹಾಗೂ ರೋಗಿಗಳ ಪಥ್ಯಕ್ಕೆ ಸರಿ ನೀನು. ಸತ್ತ ಹೆಣದ ಬಾಯಲ್ಲಿರುವವ ನೀನು ನಿನ್ನದೂ ಒಂದು ಬಾಳೇನು. ಸಾಕು ನಿನ್ನ ಸ್ಥಾನಮಾನದ ಅಗ್ಗಳಿಕೆ!

"ಸತ್ತವರ ಹೆಸರಿನಲ್ಲಿ ನಿನ್ನ ಪಿಂಡವನ್ನೇ ಹಾಕುತ್ತಾರಲ್ಲವೆ? ಕೊನೆಯಲ್ಲಿ ಕಾಗೆಗೆ ಪಿಂಡ ನೀನು. ಶಿಲದರ್ಭೆಗಳ ಮಿತ್ರ! ಹೆಚ್ಚು ಮಾತನಾಡಬೇಡ. ನಿನ್ನ ಕೀರ್ತಿಯನ್ನು ಕೊಚ್ಚಿಕೊಳ್ಳಬೇಡ. ನಿನ್ನ ಸತ್ವ ಎಷ್ಟೆಂಬುದನ್ನು ಎಲ್ಲರೂ ಬಲ್ಲರು."

ಹೀಗೆಂದ ನರದೆಲಗ ಅತ್ಯಂತ ಸಂಕೋಚದಿಂದ ತನ್ನ ಬಗ್ಗೆ ಹೇಳಿಕೊಂಡಿತು– "ಕೇಳೋ ಕೇಳು! ಬರಗಾಲದಲ್ಲಿ ಕಂಗೆಟ್ಟ ಜನ ಜಾನುವಾರುಗಳನ್ನು ರಕ್ಷಿಸುವವರು ಯಾರು? ನಾನಲ್ಲವೆ? ಆ ಕಾಲದಲ್ಲಿ ನೀನೆಲ್ಲಿರುತ್ತೀ ನಿನ್ನ ಈ ಸಹಚರರೆಲ್ಲಿರುತ್ತಾರೆ? ಒಂದೆರಡು ಹನಿ ಮಳೆ ಬಿದ್ದರೂ ಸಾಕು, ನಾನು ಆಶಾಕಿರಣವಾಗಿ ಜನರಿಗೆ ಆಧಾರವಾಗಿ ನಿಲ್ಲಬಲ್ಲೆ. ಹೀಗಿದ್ದೂ ನಾನು ಅಯೋಗ್ಯನೆ? ಅಪ್ರಯೋಜಕ ವಸ್ತುವೆ? ಹೇಗೆ ಬಂತು ನಿನ್ನ ತಲೆಯಲ್ಲಿ ಈ ವಿಚಾರ.

"ಕೇಳು! ನೀನು ಮುಖ ನೋಡಿ ಮಣೆ ಹಾಕುವುದನ್ನು ಕಲಿತಿದ್ದೀಯೆ. ದೊಡ್ಡ ಮನುಷ್ಯರೆದುರಿನಲ್ಲಿ ಸಣ್ಣದಾಗಿ ಬಡವರೆದುರಿನಲ್ಲಿ ದಪ್ಪವಾಗಿ ಇರಬಲ್ಲೆ, ನಾನು ಹಾಗಲ್ಲ. ನನ್ನದು ಸಮದೃಷ್ಟಿ ಬಡವನೇನು ಬಲ್ಲಿದನೇನು ಎಲ್ಲರನ್ನೂ ಸಮಯ ಬಂದಾಗ ರಕ್ಷಿಸುವುದು ನನ್ನ ಕರ್ತವ್ಯ. ಒಬ್ಬರಿಗೊಂದು ಒಬ್ಬರಿಗೊಂದು ಮಾಡುವ ಹಾಗೂ ಕೆಟ್ಟ ಕಾಲದಲ್ಲಿ ಕೈಕೊಟ್ಟು ಹೋಗುವ ನಿನ್ನ ಸ್ವಭಾವ ನನಗೆ ಹಿಡಿಸದು...."

ವ್ರೀಹಿ ಮಧ್ಯದಲ್ಲಿ ಬಾಯಿ ಹಾಕಿ ಹೇಳಿತು– "ಸಾಕುಮಾಡು ನಿನ್ನ ಮಾತು. ಹಾಡಿದ್ದೇ ಹಾಡೋ ಕಿಸುಬಾಯಿದಾಸ! ಸಾಕಿನ್ನು. ನಾನು ಕೊಳೆತರೂ ಒಳ್ಳೆ ಪಾನೀಯವಾಗಬಲ್ಲೆ. ಅದೇ ನೀನು ಕೊಳೆತರೆ ತಿಂದವರ ಬುದ್ಧಿಯನ್ನು ಕೆಡಿಸಿ ಹುಚ್ಚು ಹಿಡಿಸುವೆ."

"ಅಯ್ಯೋ ನಿನ್ನ ದೊಡ್ಡಸ್ತಿಕೆಯೆ"- ನರದೆಲಗ ಅಕ್ಕಿಯು ಬಾಯಿ ಮುಚ್ಚಿಸುವಂತೆ ಹೇಳಿತು- "ನೀನು ಸತ್ತವರ ಪ್ರತಿನಿಧಿ ಅಲ್ಲವೆ ? ನಿನ್ನ ಪಿಂಡ ಮಾಡಿ, ಪಿತೃ ಪಿತಾಮಹರ ಹೆಸರು ಹೇಳಿ ನಿನ್ನ ತಲೆಯ ಮೇಲೆ ಎಳ್ಳು ದರ್ಭೆ ಇಡುವರಷ್ಟೆ. ದರ್ಭೆ ಇಂದ ಆ ನಿನ್ನ ಪಿಂಡವನ್ನೂ ಒಡೆದು ಕಾಗೆಗಳಿಗೆ ಎಸೆಯುತ್ತಾರಂತೆ ನಿರ್ಲಜ್ಜ. ಕೊಳೆತರೆ ಮಾದಕ ದ್ರವ್ಯ. ಹುರಿದರೆ ಗಾಳಿಯಲ್ಲಿ ತೂರಾಡುವ ಅರಳು. ಇದೇ ತಾನೆ ನಿನ್ನ ಸತ್ವ"

ಹೀಗೆ ಅವರಿಬ್ಬರ ಅಬ್ಬರ ಅರಚಾಟ ಸಾಗಿದ್ದರೂ ಶ್ರೀರಾಮ ಒಂದು ಮಾತೂ ಆಡಲಿಲ್ಲ ಸಭಾಸದರೂ ಸಹ ಮೌನವಾಗಿದ್ದರು.

ಇದರಿಂದ ನರದೆಲಗ ತಿಲಮಿಲಗೊಂಡು. ಸಭೆಯನ್ನುದ್ದೇಶಿಸಿ ಹೇಳಿತು- "ಏಕೆ ಸುಮ್ಮನೆ ಕುಳಿತಿರುವಿರಿ ! ಯಾರ ಯೋಗ್ಯತೆ ಏನೆಂದು ಅರಿತು ನಿರ್ಣಯ ಕೊಡಲಾರಿರಾ ? ಈ ನಪುಂಸಕನ ಪಕ್ಷಪಾತಿಗಳೋ ? ಯಥಾರ್ಥ ವನ್ನು ಹೇಳಲಾರದೆ ಸುಮ್ಮನಿರುವಿರೋ ? ಆಯಿತು, ನನಗೇ ತಕ್ಕ ಶಾಸ್ತಿ ಯನ್ನು ಮಾಡಿಬಿಡಿ. ಏನು ಹೇಳಬೇಕೊ ನಿರ್ದಾಕ್ಷಿಣ್ಯವಾಗಿಹೇಳಿ. ನನ ಗೇನೂ ಬೇಸರವಿಲ್ಲ"

ನರದೆಲಗ ವ್ರೀಹಿಯನ್ನು ನಪುಂಸಕ ಎಂದದ್ದು ಕೇಳಿ ವ್ರೀಹಿಗೆ ಮೈ ಎಲ್ಲ ಉರಿದು ಹೋಯಿತು. ಅದಕ್ಕೆ ಏನು ಉತ್ತರ ಕೊಡಬೇಕೆಂದು ಹೊಳೆಯಲಿಲ್ಲ. ಮೈ ಪರಚಿಕೊಳ್ಳುವಂತಾಯಿತು. ಮಾತು ಹೊರಡ ಲಿಲ್ಲ ದುಮು ದುಮು ಮುಸು ಮುಸು ಮಾಡುತ್ತಾ ಬಿದ್ದಿತ್ತು.

ಶ್ರೀರಾಮ ನೋಡಿದ. ಪರಿಸ್ಥಿತಿ ವಿಕೋಪಕ್ಕೆ ಇಟ್ಟುಕೊಂಡಿದೆ. ನೀನೆಷ್ಟರವನು ನೀನೆಷ್ಟರವನೆಂದು ಹೋರಾಡತೊಡಗಿದರಲ್ಲ ಎಂದುಕೊಂಡು

ಹೇಳಿದ– "ಈಗ ನಾವು ನಿರ್ಣಯ ಮಾಡುವುದಿಲ್ಲ. ಅಯೋಧ್ಯೆಯಲ್ಲಿ ಮಹಾ ಸಭೆಯೊಂದನ್ನು ನಡೆಸುವೆವು. ಹರಿಹರ ಬ್ರಹ್ಮಾದಿ ಸಕಲ ದೇವತೆಗಳೂ ಸಕಲ ಋಷಿಮುನಿ ವೃಂದವೂ ಸಮಸ್ತ ಭೂಪಾಲ ನರಪಾಲರೂ ಅದರಲ್ಲಿ ಪಾಲ್ಗೊಳ್ಳುವರು. ಆ ಸಭೆಯಲ್ಲಿ ನ್ಯಾಯ ನಿರ್ಣಯವನ್ನು ಕೈಗೊಳ್ಳುವೆವು."

ಶ್ರೀರಾಮನ ಈ ನಿರ್ಣಯದಿಂದ ನರದೆಲಗಕ್ಕೆ ನಿರಾಶೆಯಾಯಿತು. 'ಇದು ರಾಜಕಾರಣಿಗಳ ಮಾತಾಯಿತು. ಬೀಸುವ ದೊಣ್ಣೆ ತಪ್ಪಿಸಿಕೊಳ್ಳುವ ಉಪಾಯ. ಮುಂದೂಡಿರುವುದು ಅದಕ್ಕಾಗಿರಬೇಕು' ಎಂದುಕೊಂಡಿತು.

ಅದೇ ಸಂದರ್ಭದಲ್ಲಿ ಶ್ರೀರಾಮ ಗೌತಮರನ್ನು ಸಂಬೋಧಿಸುತ್ತಾ– "ಕೇಳಿ, ಈ ಇಬ್ಬರನ್ನೂ ತಾವು ಆ ದಿನದವರೆಗೆ ಕಾರಾಗಾರದಲ್ಲಿ ಬಂಧಿಸಿಡಿ" ಎಂದು ಕಟ್ಟಪ್ಪಣೆ ಮಾಡಿಬಿಟ್ಟನು.

ಈ ನಿರ್ಣಯದಿಂದ ಇಬ್ಬರೂ ಅವಾಕ್ ಆದರು. ಆದರೂ ನರದೆಲಗ ಧೃತಿಗೆಡದೆ– "ನಮ್ಮನ್ನು ಕಾರಾಗಾರದಲ್ಲಿ ಬಂದಿಸಬೇಕೆ? ದಣಿ ಚಿತ್ತ! ಅದರೆ ಅಯೋಧ್ಯಾಧಿಪತಿಗಳು ಸಿರಿಮದದಲ್ಲಿ ನಮ್ಮನ್ನು ಮರೆತುಬಿಟ್ಟರೊ? ನಮಗೆ ಪ್ರಾಣಭಿಕ್ಷೆಯನ್ನು ನೀಡಿ ಕೃಪಾಸಮುದ್ರ. ಈ ಅಪಮಾನವನ್ನು ಸಹಿಸಿಕೊಂಡು ಅನಿಶ್ಚಿತ ಕಾಲ ಬಿದ್ದಿರಬೇಕಾದಿತು! ತಮಗೂ ಇದರಿಂದ ಕಲಂಕ ತಟ್ಟೀತು!!" ಎಂದು ಹೇಳಿಬಿಟ್ಟಿತು.

ಕರುಣಾಲವಾಲನಾದ ಶ್ರೀರಾಮ ಮುಗುಳ್ನಗೆ ನಕ್ಕು "ಹೆದರಬೇಡಿ. ನಿಮ್ಮನ್ನು ಮರೆಯುವುದಿಲ್ಲ" ಎಂದು ಅಭಯವಿತ್ತನು.

ಅಯೋಧ್ಯೆಯನ್ನು ಪರಿವಾರ ಸಹಿತ ತಲುಪಿದ ಮೇಲೆ ಪಟ್ಟಾಭಿಷೇಕದ ಸಿದ್ಧತೆಗಳಾಗತೊಡಗಿದವು. ಸೀತಾ ಲಕ್ಷ್ಮಣ ಹನುಮದಾದಿಗಳೊಡನೆ

ಮುಚುಕುಂದರ ಆಶ್ರಮದಿಂದ ಅಯೋಧ್ಯೆ ತಲುಪಲು ಆರು ತಿಂಗಳು ಬೇಕಾಯಿತು.

ಶ್ರೀರಾಮನ ಪಟ್ಟಾಭಿಷೇಕಕ್ಕೆ ರಾಜಮಹಾರಾಜರುಗಳೆಲ್ಲ ಆಮಂತ್ರಿತ ರಾದರು. ಅತ್ರಿ, ಭರದ್ವಾಜ, ವಿಶ್ವಾಮಿತ್ರ, ವಾಮದೇವ, ಅಗಸ್ತ್ಯ, ಕಣ್ವ, ಅಂಗೀರಸ, ಮಾರ್ಕಾಂಡೇಯ, ವಾಲ್ಮೀಕಿ ಮೊದಲಾದ ಋಷಿ ವರೇಣ್ಯರುಗಳು ಆಗಮಿಸಿದರು. ಸಕಲ ವಿದ್ವಜ್ಜನರೂ ಕವಿಪುಂಗವರೂ ನೆರೆದರು. ಅಭಿಷೇಕ ಯಥಾವಿಧಿ ನಡೆಯಿತು. ಸಂಗೀತ, ನೃತ್ಯ ಗೀತಾದಿ ಗಳು ನಡೆಯುತ್ತಿದ್ದವು. ಭೂಸುರರಿಗೆ, ಯಾಚಕರಿಗೆ, ಪಂಡಿತ ಪ್ರಕಾಂಡ ರಿಗೆ, ಮಲ್ಲರಿಗೆ, ಗಾಯಕರಿಗೆ, ಧೇನು, ದಕ್ಷಿಣೆ, ಕನಕಾಂಬರಾದಿ ಸುವಸ್ತು ಗಳನ್ನು ಯಥೇಚ್ಛ ಕೊಟ್ಟು ಸತ್ಕರಿಸಲಾಯಿತು.

ಇಂಥ ವೈಭವ ಸಮಾರಂಭದಲ್ಲೂ ಸಹ ಶ್ರೀರಾಮನಿಗೆ ನರದೆಲಗಕ್ಕೆ ಕೊಟ್ಟ ಅಭಯ ವಚನ ನೆನಪಿತ್ತು. ಅಭೀಷೇಕವಾದ ಮಾರನೆಯ ದಿನವೇ ಸಿಂಹಾಸನಾಸೀನನಾದ ಶ್ರೀರಾಮಚಂದ್ರ ಪ್ರಭು ಹೇಳಿದ- "ಅಯ್ಯೋ ಪಾಪ! ಈಗ ಏಳು ತಿಂಗಳಿಂದ ನರದೆಲಗ ಮತ್ತು ವ್ರೀಹಿಯರನ್ನು ಬಂಧಿಸಿ ಟ್ಟಿದ್ದೇವೆ. ಅವರ ಬಗ್ಗೆ ಯಥಾಯೋಗ್ಯ ನಿರ್ಣಯ ಕೈಗೊಳ್ಳಬೇಕಾಗಿದೆ. ಹನುಮಂತ, ನೀನು ಹೋಗಿ ಅವರಿಬ್ಬರನ್ನೂ ಕರೆದುಕೊಂಡು ಬಾ" ಎಂದು ಆಜ್ಞಾಪಿಸಿದನು.

ಹನುಮಂತ ಪಂಚನದಿಗಳ ದಂಡೆಯ ಮೇಲಿದ್ದ ಗೌತಮರ ಆಶ್ರಮಕ್ಕೆ ಬಂದಿಳಿದ. ವಾದಿಪ್ರತಿವಾದಿಗಳನ್ನು ಅವರು ಬಂದೀಖಾನೆಯಲ್ಲಿಟ್ಟಿದ್ದರಷ್ಟೆ. ರಾಮನ ಆದೇಶವನ್ನು ಕೇಳಿದ ಮಹರ್ಷಿಗಳು ಆ ಇಬ್ಬರೊಡನೆ ರಾಮನ

ರಾಜಸಭೆಯಲ್ಲಿ ಬಂದು, ಅಲ್ಲಿ ತ್ರಿಭುವನಾಧಿಪತಿ ಇಂದ್ರಾದಿ ಸಮಸ್ತ ವೃಂದಾರಕ ವೃಂದವನ್ನು ಕಂಡು ಸಂತಸಗೊಂಡರು.

ನರದೆಲಗ ಕಣ್ತೆರೆದು ಆ ಸಭೆಯಲ್ಲಿ ವಸುಗಣಗಳನ್ನು ನೋಡಿತು. ಭುಜಂಗರು, ಕಿನ್ನರರು, ಯಕ್ಷರಾಕ್ಷಸರು, ಶಶಿ ರವಿ ಆದಿತ್ಯರು, ವಿದ್ಯಾಧರರು, ಗುಹ್ಯಕರು ಎಲ್ಲರೂ ಆಸೀನರಾಗಿರುವುದನ್ನು ಕಂಡಿತು. ವಸುಧೆಯ ದೇವತೆಗಳು, ವಸುಧಾಪಾಲಕರು, ವಸುಪಾಲಕ ವೈಶ್ಯರು, ಚತುರ್ಥವರ್ಣದಲ್ಲಿ ಜನಿಸಿದ ಕಲಾಕೋವಿದರು, ಶಿಲ್ಪವಿಶಾರದರು ಎಲ್ಲರತ್ತಲೂ ಕಣ್ಣು ಹೊರಳಿಸಿ, ಕೈಜೋಡಿಸಿ, ಸಿರಬಾಗಿ ನಮಸ್ಕರಿಸಿತು. ಎಷ್ಟೇ ಆಗಲಿ ನರದೆಲಗ ನೀಚಕುಲದವನು. ವಿನಯಾದಿ ಸದ್ಗುಣಗಳು ಆತನ ರೋಮ ರೋಮಗಳಲ್ಲಿ ಸಹಜವಾಗಿ ಇದ್ದವು. ಆದ್ದರಿಂದ ಕೈಮುಗಿದು "ರಘುವರ ನಿಮ್ಮ ನಿರ್ಣಯವೇನು ? ದಯಮಾಡಿ ಅಪ್ಪಣೆ ಕೊಡಿಸಿ" ಎಂದು ಪ್ರಾರ್ಥಿಸಿತು.

ಶ್ರೀರಾಮನು ನಿರ್ಣಯದ ಗುರುತರ ಕಾರ್ಯವನ್ನು ಉಪಸ್ಥಿತ ಸಭಾಸದರಿಗೊಪ್ಪಿಸುತ್ತಾ– "ನೀವು ದಾಕ್ಷಿಣ್ಯಕ್ಕೊಳಗಾಗದೆ, ಕೇವಲ ಗುಣಾವಗುಣಗಳನ್ನು ಆಧಾರವಾಗಿಟ್ಟುಕೊಂಡು ಯುಕ್ತಾಯುಕ್ತವಾದ ನಿರ್ಣಯವನ್ನು ಕೊಡಿ" ಎಂದು ಆದೇಶವಿತ್ತನು.

ಮುನಿಪುಂಗವರು ವೃಂದಾರಕವೃಂದದ ವದನಾರವಿಂದದತ್ತ ನೋಡಿದರು. ಅಮರರು ಅಮರೇಂದ್ರನತ್ತ ತಿರುಗಿದರು. ಅಷ್ಟರಲ್ಲಿ ಭಾರ್ಗವರಾಮರು– "ದೇವೇಂದ್ರ, ಇವರಿಬ್ಬರ ಸತ್ವವೆಷ್ಟೆಂಬುದನ್ನು ಚೆನ್ನಾಗಿ ಪರೀಕ್ಷಿಸಿ ಹೇಳು" ಎಂದಪ್ಪಣೆ ಮಾಡಿದರು.

ಬಹು ಬುದ್ಧಿಶಾಲಿಯಾದ ಇಂದ್ರ ಪರೀಕ್ಷಿಸಿದ. ನಿಸ್ಸಂದಿಗ್ಧ ವಾಣಿ ಯಲ್ಲಿ ತೀರ್ಪಿತ್ತ :– "ಸಾರ ಹೃದಯನು ನರದೆಲಗ ನಿಸ್ಸಾರ ನೀ ವ್ರೀಹಿ"

ಇಂದ್ರನ ನಿರ್ಣಯ ನೀತಿಯುಕ್ತವಾದುದೆಂದು ಆಂಜನೇಯ ಅನು ಮೋದಿಸಿದ. ಮಹರ್ಷಿ ನಾರದರತ್ತ ನೋಡಿದ. ನಾರದರೊಪ್ಪಿಕೊಂಡರೆ ಹದಿನಾಲ್ಕು ಲೋಕಕ್ಕೂ ಸಮಾಚಾರ ಮುಟ್ಟಿಸಿದಂತಾಗುವುದಷ್ಟೆ ! ನಾರ ದರು ಎರಡನ್ನೂ ಕೈಗೆತ್ತಿಕೊಂಡರು. ಈ ವ್ರೀಹಿ ಈ ಏಳು ತಿಂಗಳೊಳ ಗಾಗಿ ಮ್ಲಾನವಾಗಿಬಿಟ್ಟಿದೆ. ಈ ನರದೆಲಗನಾದರೋ ಎಷ್ಟು ಹೊಸದಾ ಗಿದೆ ! ವ್ರೀಹಿ ದುರ್ಬಲ. ಈಗ ಉಪಯೋಗಿಸಲು ಬಾರದಾಗಿದೆ. ಈ ರಾಗಿಯ ಬಣ್ಣ ಕೆಟ್ಟಿಲ್ಲ. ಸತ್ವ ಕುಗ್ಗಿಲ್ಲ. ಆದ್ದರಿಂದ ಶ್ರೇಷ್ಠ ರಾಗಿ ಎಂದು ಉದ್ಗರಿಸಿದರು.

ನಾರದರ ಮಾತಿಗೆ ಕಪಿಲ ಮಹರ್ಷಿಗಳ ಸಮರ್ಥನೆಯೂ ದೊರೆ ಯಿತು. "ಇನ್ನೇನು ಹೇಳಬೇಕು. ಈ ವ್ರೀಹಿ ದೊಡ್ಡವರ ದುಂಬಾಲ ಬಿದ್ದದ್ದು, ಈಗ ಸತ್ವಹೀನ".

'ನರದೆಲಗನೇ ಅರ್ಹ. ಸಾರ ಹೃದಯ' ಎಂಬ ನಿರ್ಣಯ ಸರ್ವಾನು ಮತದಿಂದ ಅಂಗೀಕೃತವಾಯಿತು.

ಆಗ ಶ್ರೀರಾಮನು ಕರಾಂಭುಜದಲ್ಲಿ ನರದೆಲಗನನ್ನೆತ್ತಿಕೊಂಡು ತನ್ನ ಹೆಸರನ್ನು– 'ರಾಘವ' ಎಂಬುದನ್ನು ಇತ್ತು ಗೌರವಿಸಿದ.

ರಾಗಿಯು ರಾಮನ ಚರಣಾಂಬುಜದ ಮೇಲೆ ನತ ಮಸ್ತಕ ವಾಯಿತು. ಅಂದಿನಿಂದ 'ರಾಘವ ಧಾನ್ಯ'ವೆಂದು ಗೇಗೀಯ ಮಾನ

ಪಾಪದ್ದು ಜನರ ನಲ್ಮೆಯ ನಾಲಿಗೆಯಲ್ಲಿ ನಲಿದಾಡಿ 'ರಾಗಿ'ಯಾಗಿ ಪ್ರಸಿದ್ಧಿಗೆ ಬಂದಿತು.

ದೇವ, ಅಸುರ, ಗಂಧರ್ವಾದಿಗಳೆಲ್ಲರೂ ರಾಗಿಯನ್ನು ಅಭಿನಂದಿಸಿದರು. ಬ್ರಾಹ್ಮಣರು ಅದರ ತಲೆಯ ಮೇಲೆ ಮಂತ್ರಾಕ್ಷತೆಯನ್ನು ಹಾಕಿ ಹರಸಿದರು.

ಸನ್ಮಾನದ ಸರಮಾಲೆ ಸುರಿಯಿತು. ಬ್ರಹ್ಮ ವಿಷ್ಣು ಮಹೇಶ್ವರರು ಕ್ರಮವಾಗಿ ಕಮಂಡಲು, ಚಕ್ರ ಹಾಗೂ ತ್ರಿಶೂಲಗಳನಿತ್ತು ಗೌರವಿಸಿದರು. ಇಂದ್ರನು ಬೀಜಬಿತ್ತುವ ಯಂತ್ರವನ್ನು ಕೊಟ್ಟ. ಶೇಷ ಮತ್ತು ವಾಸುಕಿಯವರು ಹಗ್ಗ ಕಣ್ಣಿಗಳನ್ನು ಕೊಟ್ಟರು.

ಕುಬೇರನು ಅಲ್ಪ ಹಣವನ್ನು ಕೊಟ್ಟ. ಅವನು ದೇವಾಂಗನೆಯರಿಗೆ ಆದೇಶವಿತ್ತನು– "ನೀವು ರಾಗಿಯನ್ನುಣ್ಣುವವರ ಮನೆಯ ಸತಿಯರಾಗಿ ಇದರಿಂದ ಪಕ್ವಾನ್ನವನ್ನು ಮಾಡಿ ಸರ್ವರನ್ನೂ ಸಂತೋಷಪಡಿಸಿ"

ಇಂದಿಗೂ ರಾಗಿ ಉಣ್ಣುವವರ ಆತಿಥ್ಯ ವಿಶ್ವವಿಖ್ಯಾತವಾದದು. ದೊಡ್ಡವರ ಮನೆ ನೋಟ ಬಡವರ ಮನೆ ಊಟ ಎಂಬ ಗಾದೆ ಸಾರ್ಥಕವಾಯಿತು. ರಾದಿಗೆ ಬಂದ ಪಾರಿತೋಷಕಗಳೆಲ್ಲವೂ ಇಂದಿಗೂ ಉಪಯೋಗವಾಗುತ್ತಿದೆ.

ಸರ್ವ ಸಮ್ಮಾನಿತ ರಾಗಿಯನ್ನು ಕಂಡು ಆಂಜನೇಯನಿಗಂತೂ ಸಂತೋಷ ಉಕ್ಕಿಬಂದಿತು. ಆದರೂ ಅವನ ಮುಖದ ಮೇಲೆ ಅತೃಪ್ತಿಯ ಛಾಯೆ! ರಾಮನ ಸೂಕ್ಷ್ಮ ದೃಷ್ಟಿಗೆ ಅದು ಗೋಚರಿಸಿತು. ಹನುಮನು ರಾಮನ ಇಂಗಿತವನ್ನರಿತು ಹೇಳಿದ :–

"ಪ್ರಭೋ ! ತಾವು ತಮ್ಮ ನಾಮವನ್ನೇ ಈತನಿಗೆ ಕೊಟ್ಟುಬಿಟ್ಟಿರಿ. ಇನ್ನು ನನಗೇನು ಆಧಾರ ?" ಎಂದ.

ರಾಮನು ಮುಗುಳ್ನಗೆ ಸೂಸುತ್ತ "ನಿನ್ನ ಹೆಸರನ್ನು ಕೊಡ ಬೇಕೆಂದಿರುವೆ ಏನು ? ಆಗಲಿ ಕೊಟ್ಟುಬಿಡು" ಎಂದ.

ಹನುಮ ಕೈಮುಗಿದು ಬಿನ್ನವಿಸಿದ– "ನಾವು ದಾಸರು, ತಾವು ಈಶರು. ನಾವು ಸೇವಕರು, ತಾವು ಸೇವ್ಯರು. ತಾವು ಮಾಡಿದ್ದಕ್ಕೆ ಅಡ್ಡಿ ಆತಂಕ ಉಂಟೆ ? ತಾವು ಪ್ರಸನ್ನರಾದಿರೆಂದರೆ ತಮ್ಮನ್ನೇ ತಾವು ಕೊಟ್ಟು ಬಿಡುವಿರೆಂಬುದು ಲೋಕವಿಖ್ಯಾತವಲ್ಲವೆ ? ತಾವು ದೊಡ್ಡವರು."

"ಹೌದಪ್ಪ, ನಮ್ಮ ಹೆಸರು ದೊಡ್ಡದು. ನಿನ್ನ ಕರ್ಮ ದೊಡ್ಡದು. ನಮ್ಮ ದೊಡ್ಡಸ್ತಿಕೆ ಜನ್ಮಜಾತ. ನಿನ್ನದೋ ಕರ್ಮಾರ್ಜಿತ." ಎಂದು ನಸುನಕ್ಕ.

ಇತ್ತ ವ್ರೀಹಿ ಸರ್ವರಿಂದಲೂ ಉಪೇಕ್ಷಿತವಾಗಿ ತಲೆಬಾಗಿ ಬಿದ್ದಿತ್ತು. ಮುಖ ಕಂದಿಹೋಗಿತ್ತು. ಪ್ರಾಯಃ ನಾಚಿ ನಿಶ್ಚೇಷ್ಟಿತವಾಗಿತ್ತು. ಕೃಪಾಲು ಶ್ರೀರಾಮನಿಂದ ವ್ರೀಹಿಗೆ ಈ ಅಪಮಾನ, ಈ ತಿರಸ್ಕಾರ ಸಹಿಸ ಲಾಗಲಿಲ್ಲ. ಆದ್ದರಿಂದ ಹತ್ತಿರ ಕರೆದು ಬೆನ್ನು ತಟ್ಟಿ– "ಛೆ. ಇದ್ದದ್ದನ್ನು ಇದ್ದಂತೆ ಹೇಳಿದರೆ ಖಿನ್ನನಾಗಬೇಕೆ ? ಈ ನರದೆಲಗ ಅಲ್ಪತೃಪ್ತ. ಎಲ್ಲಿ ಆದರೆ ಅಲ್ಲಿ ಹುಟ್ಟಿ, ಬೆಳೆದು, ಲೋಕಾಧಾರವಾಗಿದ್ದು, ಬಡವರ ಜೀವದುಸಿ ರಾಗಿ, ಜನತಾ ಜನಾರ್ದನನ ಸೇವೆಯಲ್ಲಿರುತ್ತದೆ. ಸೇವಾವಕಾಶಕ್ಕಾಗಿ ವರ್ಷ ಗಟ್ಟಲೆ ಕಾದು ಕುಳಿತಿರುತ್ತದೆ. ಆದ್ದರಿಂದ ಜನ ಮೆಚ್ಚಿ ಗೌರವಿಸಿದರು. ಗುಣಕ್ಕೆ ಮಾತ್ಸರ್ಯವೆ ? ನಿನ್ನನ್ನು ಯಾರೂ ತಿರಸ್ಕರಿಸಿಲ್ಲ. ನೀನು ಬಹುಬೇಗ ನಿಸ್ಸತ್ವನಾಗಿ ಬಿಡುತ್ತೀ. ಆದಾಗ್ಯೂ ಈಗಲೂ ನಿನ್ನದೇ ಮೇಲು

ಗ್ಯೆಯಾಗಿ ನೀನು ಬಾಳುತ್ತೀಯೆ. ನಿನ್ನ ಪ್ರತಿಷ್ಠೆಗೆ ಎಂದೆಂದಿಗೂ ಧಕ್ಕೆ ಬರುವುದಿಲ್ಲ" ಎಂದು ಸಮಾಧಾನ ಪಡಿಸಿತು.

ಆಗ ಸರ್ವ ಸಮ್ಮಾನಿತ 'ರಾಘವ ಧಾನ್ಯ' ಅತಿ ವಿನಯದಿಂದ ವ್ರೀಹಿಯ ಬಳಿಗೆ ಬಂದು, ಕೈ ಕುಲಕಿ ಮತ್ತೆ ಹೇಳಿತು- "ತಮ್ಮ! ಇಷ್ಟಕ್ಕೇ ಕಂಗೆಟ್ಟರೆ ಹೇಗೆ? ಈಗ ಆದದ್ದಾದರೂ ಏನು? ನಮ್ಮ ನಮ್ಮ ಕಾರ್ಯಕ್ಷೇತ್ರ ನಮ್ಮ ನಮ್ಮ ಪಾಲಿಗೆ ಇದ್ದದ್ದೇ. ನೀನು ಚೋಳದೇಶಕ್ಕೆ ಹೋಗು (ತಮಿಳುನಾಡು) ಅಲ್ಲಿ ಬಡವಬಲ್ಲಿದರೆಲ್ಲರ ಸೇವೆಯನ್ನು ಮಾಡಿಕೊಂಡಿರು. ನಾನು ಈ ಕರ್ನಾಟಕದ ಒಂದಂಚಿನಲ್ಲಿ ಬಿದ್ದಿರುತ್ತೇನೆ. ಒಟ್ಟಿನಲ್ಲಿ ನಾವಿರುವುದು ಜನತಾ ಜನಾರ್ದನನ ಸೇವೆಗಲ್ಲವೆ?" ಎಂದು ಸಮಾಧಾನ ಹೇಳಿತು.

ಒಟ್ಟಿನಲ್ಲಿ ಪುರಾಣದ ಚೌಕಟ್ಟಿನಲ್ಲಿ ಕಲ್ಪಿಸಿರುವ ಈ ಕಥೆಗೆ ಕಲ್ಪನೆಯೇ ಆಧಾರ. ರಸ ಕವಿಗಳ ಕೈಗೆ ಸಿಕ್ಕವಸ್ತು ರಸಭರಿತವಾಗಿ ರಸಿಕರ ಮನಸೆಳೆಯುವ ಕಾವ್ಯವಾಗಬಲ್ಲದೆಂಬುದಕ್ಕೆ ಈ 'ರಾಘವ ಧಾನ್ಯ ಚರಿತೆ' ಒಂದು ನಿದರ್ಶನ. ಈ ಕೃತಿ ರಾಗಿರಾಮಾಯಣವೆಂದು ಪ್ರಸಿದ್ಧಿ ಪಡೆದಿದೆ.

ರಾಗಿ, ಸ್ವಲ್ಪ ಅಲ್ಪ ಸ್ನೇಹ ಸಹಾನುಭೂತಿ ದೊರೆತರೂ ಸಂತೃಪ್ತಿ ಪಡೆದು ಎಲ್ಲ ಬಗೆಯ ಸೇವೆಗೂ ಸಿದ್ಧರಾದಂಥವರ ಪ್ರತಿನಿಧಿ. ಉಚ್ಚ ವರ್ಗದವರೆಂದುಕೊಂಡು ಪರಂಪರೆಯ ಪೋಷಕರಾಗಿ, ಸಮಾಜದಲ್ಲಿ ಸುಪ್ರತಿಷ್ಠಿತರಾಗಿರುವವರ ಪ್ರತಿನಿಧಿ ವ್ರೀಹಿ. ನಿಜವಾದ ರಾಮಭಕ್ತರು ಗುಣಗ್ರಾಹಿಗಳು. ಸಮಾಜದಲ್ಲಿ ಪಡೆದ ಅಗ್ಗಳಿಕೆಯಿಂದ ಮಾರುಹೋಗುವವರಲ್ಲ ಪರಂಪರಾ ಪ್ರಾಪ್ತ ಸ್ಥಾನಮಾನಗಳೆಲ್ಲ ತದನುಪಾತವಾದ ಗುಣಕರ್ಮಗಳಿಲ್ಲದಿದ್ದರೆ ನಿರರ್ಥಕವಲ್ಲವೆ? ರಾಮನ ಹಾಗೂ ಅವನ ನೈಜ ಭಕ್ತರ ಸ್ನೇಹ

ಭಾಜನರಾಗಬೇಕಾಗಿದ್ದಲ್ಲಿ ಅಗ್ನಿಪರೀಕ್ಷೆಗೆ ಸಿದ್ಧವಾಗಿರಬೇಕು. ಗುಣಶೀಲ ಸಂಪನ್ನರಾಗಿರಬೇಕು.

ಒಟ್ಟಿನಲ್ಲಿ ಈ ಕಥಾತ್ಮಕ ರೋಚಕ ಕಾವ್ಯದಲ್ಲಿ ವರ್ಗಕಲಹವನ್ನು ಇಂಬುಕೊಟ್ಟು ಎತ್ತಿ ಹಿಡಿಯದೆ ಸಾಮರಸ್ಯವನ್ನು ಸ್ಥಾಪಿಸುವ ಮೂಲಕ ಕವಿ ತನ್ನ ಶಾಂತಿಪ್ರಿಯತೆಯನ್ನೂ ಹೊಣೆಗಾರಿಕೆಯನ್ನೂ ನಿಚ್ಚಳವಾಗಿ ಮೆರೆದಿದ್ದಾನೆಂಬುದು ಗಮನಾರ್ಹ.

## ಮಂಗಳ

ಮಂಗಳಂ ಸರ್ವಾಧಿ ಭೂತಗೆ
ಮಂಗಳಂ ಸರ್ವವನು ಪೊರೆವಗೆ
ಮಂಗಳಂ ತನ್ನೊಳಗೆ ಲೋಕವ ಲಯಿಸಿಕೊಂಬುವಗೆ
ಮಂಗಳಂ ಸರ್ವಸ್ವತಂತ್ರಗೆ
ಮಂಗಳಂ ಸತ್ಯಸ್ವರೂಪಗೆ
ಮಂಗಳಂ ಸಿರಿಯೊಡೆಯ ಚೆನ್ನಿಗರಾಯ ಕೇಶವಗೆ

# ದಾಸಸಾಹಿತ್ಯ ಕೃತಿಗಳು-೪

## ಹರಿಭಕ್ತಿಸಾರ

ಭಕ್ತಿ ಸಾಹಿತ್ಯದಲ್ಲಿ ಕನಕದಾಸರ 'ಹರಿಭಕ್ತಿ ಸಾರ'ವೆಂಬುದು ಒಂದು ವಿಶಿಷ್ಟ ಕೃತಿ. ಇದನ್ನು ಯೋಗಕ್ಷೇಮವನ್ನು ವಿಚಾರಿಸಿ ಹಾಗೂ ತಿಳಿಸಿ ಬರೆದ ಪತ್ರದ ಶೈಲಿಯಲ್ಲಿ ರಚಿಸಿದ್ದಾರೆ. ಅವರ ಆರಾಧ್ಯದೇವ ಸುರಪುರದ ಕೇಶವರಾಯ. ಈ ಪತ್ರವನ್ನು ಅವನ ವಿಳಾಸಕ್ಕೆ ಬರೆದು ಕಳಿಸಿದ್ದಾರೆ. ಆರಂಭದಲ್ಲಿ ಅಭಿನಂದಿಸಿ– 'ಹೇ ಭಕ್ತ ಕುಟುಂಬಿ, ಕೃಪಾಲು, ಪ್ರಭು' ಎಂದು ಕೊಂಡಾಡಿದ್ದಾರೆ. ಅವನ ಪರಿವಾರದಲ್ಲಿರುವ ಹಿರಿಯರನ್ನು ತಾರತಮ್ಯ ಕ್ರಮದಲ್ಲಿ ಸ್ಮರಿಸಿದ್ದಾರೆ. 'ನಾವು ಸುಕ್ಷೇಮಿಗಳು ನಿಮ್ಮ ಪದಾಬ್ಜ ದರ್ಶನದಿಂದ' ಎಂದು ಯೋಗಕ್ಷೇಮವನ್ನು ತಿಳಿಸಿ 'ರಕ್ಷಿಸು ನಮ್ಮ ನನವರತ' ಎಂದು ಮತ್ತೆ ಮತ್ತೆ ಬೇಡಿಕೊಂಡಿದ್ದಾರೆ.

ಈ ಕಿರು ಕೃತಿಯಲ್ಲಿ ಭಾಷೆಯ ಓಘ ಅಮೋಘ. ಭಾವತರಂಗ ಓದುಗರನ್ನು ರಸಸಿಕ್ತರನ್ನಾಗಿ ಮಾಡುತ್ತದೆ. ಜೀವರ ಅಸ್ವಾತಂತ್ರ್ಯ, ದೇಹದ ಅನಿತ್ಯತ್ವ, ಮಾನವನ ಅಸಹಾಯಕತೆ – ಇವುಗಳನ್ನು ಬಹು ಮಾರ್ಮಿಕವಾಗಿ ಚಿತ್ರಿಸಿ, ಪರಮಾತ್ಮನ ಅಪಾರ ಕಾರುಣ್ಯ, ನಿರ್ವ್ಯಾಜ ಕೃಪೆಯೊಂದೇ ತಾರಕವೆಂಬ ದೃಢಭಾವದಿಂದ ಜೀವೇಶ್ವರರ ಸಂಬಂಧವನ್ನು ನಿರೂಪಿಸುವ ದಾರ್ಶನಿಕ ವಿಚಾರದಿಂದ ಓತಪ್ರೋತವಾಗಿದೆ ಕಾವ್ಯ. ಇದರಲ್ಲಿ ಕೇವಲ ೧೧೦ ಭಾಮಿನೀ ಷಟ್ಪದಿಗಳಿವೆ. ಅಂದರೆ, ಇದೊಂದು 'ಶತಕ' ಕೋಟಿಯ ಕಾವ್ಯ. ಇದನ್ನು ತತ್ವಪ್ರಧಾನ, ಭಾವನಾತ್ಮಕ ಗೀತಕಾವ್ಯ ಎಂದೂ ಪರಿಚಯಿಸಬಹುದು.

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿಹೀನ
ನಾನು ಮಹಾಮಹಿಮ ಕೈವಲ್ಯಪತಿ ನೀನು ।
ಏನು ಬಲ್ಲೆನೊ ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ-
ಮಾನರುಂಟೇ ದೇವ ರಕ್ಷಿಸು ನಮ್ಮನನವರತ ॥

ಈ ಉದಾಹರಣೆಯು ಅವರ ದಾರ್ಶನಿಕ ವಿಚಾರವನ್ನು ಭಕ್ತಿರಸಸಿಕ್ತವನ್ನಾಗಿ ಎತ್ತಿಹಿಡಿದಿದೆ. ಜೀವ ಮತ್ತು ಈಶ್ವರರ ಭೇದಪರವಾದದ್ದು ಅವರ ದಾರ್ಶನಿಕ ನಿಲುವು.

'ಮೊದಲ ಜನುಮವನರಿಯೆ' ಎಂಬ ಪದ್ಯದಲ್ಲಿ, ಜೀವರ ಜನ್ಮ ಮರಣಕ್ಕೆಲ್ಲ ಅವರವರ ಕರ್ಮವೇ ಕಾರಣವೆಂಬ ಪ್ರಮೇಯವನ್ನು ಎತ್ತಿಕೊಂಡು, 'ಈ ಸೃಷ್ಟಿಗೆ ಮೊದಲು ಬಂದ ಜನ್ಮಕ್ಕೆ ಕಾರಣವಿರಬೇಕಲ್ಲ, ಅದಾವುದು ? ಅದರ ಜ್ಞಾನವೇ ನನಗಿಲ್ಲ ! ಕರ್ಮದಿಂದ ಮತ್ತಷ್ಟು ಜನ್ಮಗಳನ್ನೆತ್ತುವಷ್ಟು ಕರ್ಮ. ಹೀಗೆ ಕರ್ಮ ಸಂತತಿ ಬೆಳೆಯುತ್ತಿರುವಾಗ ಈ ಕರ್ಮದ ಕೊನೆ ಎಂದು ?' ಎಂದು ಜಿಜ್ಞಾಸೆ ಮಾಡುತ್ತಾ 'ಬೀಜವೃಕ್ಷ ನ್ಯಾಯ'ದಂತಿರುವ ಈ ಕರ್ಮ ಮೀಮಾಂಸೆಯ ಕಗ್ಗಂಟನ್ನು ಬಿಡಿಸುವ 'ಕಾರುಣ್ಯ ಮೂರ್ತಿ ನೀನೊಬ್ಬನೇ ಇದರ ಮರ್ಮವನ್ನರಿತವನು' ಎಂದು ತಿಳಿಸಿದ್ದಾರೆ.

'ನಿನ್ನ ಸೂತ್ರದಲಾಡುವುವು' ಎಂಬ ಪದ್ಯದಲ್ಲಿ ಈ ಜಗತ್ತಿನಲ್ಲಿ ಪರಮಾತ್ಮನ ಅಧೀನವಾಗಿಯೇ ಸಕಲ ಕ್ರಿಯೆಗಳೂ ಜೀವರ ಕರ್ಮಾನುಸಾರ ನಡೆಯುತ್ತಿರುವುದೆಂಬ ಪ್ರಮೇಯವನ್ನು ಸಾಧಿಸಿದ್ದಾರೆ. ಪರಮಾತ್ಮ

ಸೂತ್ರಧಾರ. ಜಗತ್ತು ರಂಗಮಂಚ, ಇಲ್ಲಿ ನಡೆಯುವುದೆಲ್ಲ ಆ ಸೂತ್ರ ಧಾರನ ಇಚ್ಛಾನುಸಾರ. ಇದು ಅವನ ಲೀಲೆ. ಅವನೇ ನಮ್ಮನ್ನು ರಕ್ಷಿಸ ಬೇಕೆಂದು ಸರ್ವಾರ್ಪಣ ಭಾವವನ್ನು ಎತ್ತಿ ಹಿಡಿದಿದ್ದಾರೆ.

ಒಟ್ಟಿನಲ್ಲಿ ಭಕ್ತಿ ಪೋಷಕವಾದ ದಾರ್ಶನಿಕ ಮತಕ್ಕೆ ಮಾರುಹೋದ ವರು ಕನಕದಾಸರು. ಪರಮಾತ್ಮನೇ ಇಷ್ಟಪ್ರದ ಎಂಬ ಭಾವನೆ ದೃಢ ವಾದಾಗ ಆವನಲ್ಲಿ ಸ್ನೇಹ ಬೆಳೆಯುತ್ತದೆ. ಅವನ ಮಹಿಮೆ, ಕಾರುಣ್ಯಾದಿ ಸದ್ಗುಣಗಳ ಜ್ಞಾನ ಹೆಚ್ಚಿದಂತೆ ಆತನಲ್ಲಿ ಪೂಜ್ಯ ಭಾವವು ಹೆಚ್ಚುತ್ತದೆ. ಪೂಜ್ಯ ಭಾವದಿಂದ ಓತಪ್ರೋತವಾದ ಸ್ನೇಹವೇ ಭಕ್ತಿ. ಈ ಭಕ್ತಿಯಲ್ಲಿ ದಾರ್ಢ್ಯ ಬರುವುದು ವೈರಾಗ್ಯದಿಂದ. ವೈರಾಗ್ಯಕ್ಕೆ ಕಾರಣವಾಗುವುದು ವಿಷಯ ಸುಖಗಳ ಅನಿತ್ಯತೆ ಮತ್ತು ಅಜ್ಞಾನಾದಿ ತನ್ನಲ್ಲಿ ಮನೆ ಮಾಡಿರುವ ದೋಷ ಜ್ಞಾನದಿಂದ. ಇವುಗಳ ಮಾರ್ಮಿಕ ನಿರೂಪಣೆ 'ಹರಿಭಕ್ತಿಸಾರ' ದಲ್ಲಿ ಕಾಣಬಹುದಾಗಿದೆ.

ಚೇತನರು ಐಹಿಕ ಸುಖಕ್ಕಾಗಿ ಹಾತೊರೆಯುತ್ತಾರೆ. ಅಪಾರ ಕಷ್ಟ ಕೋಟಲೆಗಳನ್ನು ಅನುಭವಿಸುತ್ತಿರುತ್ತಾರೆ. ಅಂಥವರ ಅಜ್ಞಾನವನ್ನು ಹೋಗಲಾಡಿಸಲು ಹಾಗೂ ಅವರ ದೃಷ್ಟಿಯನ್ನು ಸೃಷ್ಟಿ ಸ್ಥಿತಿ ಲಯಕ್ಕೆ ಕಾರಣವಾದ ಸರ್ವರ ಅಂತರ್ಯಾಮಿಯಾಗಿದ್ದು ನಿಯಾಮನಮಾಡಿ ಯಥಾ ಯೋಗ್ಯ ಸಾಧನೆ ಮಾಡಿಸುತ್ತಿರುವ ಪರತತ್ವದ ಕಡೆ ಸೆಳೆಯುವುದೇ ಅವರ ಪದಗಳ ಮುಖ್ಯ ಉದ್ದೇಶ.

ಜೀವರ ತೊಳಲಾಟಕ್ಕೆ ಕಾರಣವಾಗಿರುವುದು 'ನಾನೇ ಸ್ವತಂತ್ರ, ನನ್ನ ಭವಿಷ್ಯದ ರೂವಾರಿ ನಾನೇ ಎಂಬ 'ಅಹಂ'. ವಸ್ತುಸ್ಥಿತಿಯೇ ಬೇರೆ. ವಿಶ್ವದಲ್ಲಿರುವುದು ಒಂದೇ ಒಂದು ಸ್ವತಂತ್ರ ತತ್ವ. ಮಿಕ್ಕ

ಜಡ ಚೇತನಗಳೆಲ್ಲವೂ ಆ ಸ್ವತಂತ್ರ ಪರಮ ಪುರುಷನ ನಿಯಂತ್ರಣಕ್ಕೊಳ ಪಟ್ಟದ್ದು. ಇದನ್ನರಿತು ಆ ಮಹಾ ಮಹಿಮನಿಗೆ ತನ್ನ ಲಘು ಜೀವನವನ್ನು ಸಮರ್ಪಿಸುವುದೇ ಸುಖ ಶಾಂತಿಯ ಮಾರ್ಗ. ವಿಶ್ವಾಸಪೂರ್ವಕ ಸದಾ ಅವನನ್ನು ಸ್ಮರಿಸುತ್ತಿರಬೇಕು. ದಯಾಮಯ ನಮ್ಮನ್ನು ಉದ್ಧರಿಸು ತ್ತಾನೆ. ಸಂಶಯವೇ ಬೇಡ ಎಂಬುದು ದಾಸರ ನಿಲುವು.

ಕನಕದಾಸರ ಪ್ರತಿಭೆ ಅದ್ಭುತವಾದುದು. ಅವರ ಪಾಂಡಿತ್ಯ ಪ್ರೌಢಿಮೆಯೂ ಅಷ್ಟೇ. ಅದರೊಂದಿಗೆ ವಿಮರ್ಶಾತ್ಮಕ ಬುದ್ಧಿ. ಈ ಕಾರಣ ದಿಂದಲೇ ಅವರು ಇತರರು ಹೇಳಿದ್ದನ್ನೇ ಹೇಳುತ್ತಿರುವಂತೆ ಮೇಲು ನೋಟಕ್ಕೆ ಕಂಡರೂ ಅಲ್ಲಿ ಕನಕನ ಪ್ರಭೆ ಎದ್ದು ಕಾಣಿಸುತ್ತದೆ.

ಒಟ್ಟಿನಲ್ಲಿ ಕನಕದಾಸರು ಸಿದ್ಧ ಕವಿಗಳು. ಅಪರೋಕ್ಷಜ್ಞಾನಿಗಳು. ಅವರಿದ್ದ ಸಂದರ್ಭ, ಅವರ ಒಡನಾಡಿಗಳ ಸಹವಾಸ – ಅವರ ಕಾವ್ಯ ಸ್ಫೂರ್ತಿಯ ಚಿಲುಮೆಗೆ ಪುಟವಿಟ್ಟಿದೆ. ಪುರಂದರದಾಸರು, ಶ್ರೀ ವ್ಯಾಸ ರಾಯರು, ವಾದಿರಾಜ ಶ್ರೀಪಾದಂಗಳವರಂಥವರ ಗೋಷ್ಠಿಯಲ್ಲಿ ವೈ ಮರೆತು ಭಗವನ್ಮಹಿಮಾತಿಶಯ ವರ್ಣನೆ ಮಾಡುತ್ತಾ ನಲಿದು ನರ್ತಿಸಿದ ಕನಕದಾಸರ ಜೀವನವನ್ನು ಪರಾಮರ್ಶಿಸಿದರೆ 'ಜಾತಿ ವ್ಯವಸ್ಥೆ ಸಮಾಜದ ದೃಢತೆಗಾಗಿರಬಹುದು. ಆದರೆ ಆಧ್ಯಾತ್ಮಿಕ ಸಾಧನೆಯಲ್ಲಿ, ಲೋಕೋತ್ತರ ಜೀವನದಲ್ಲಿ ಅದಕ್ಕೆ ಮಹತ್ವವಿಲ್ಲ. ಸಮರಸವೇ ಜೀವನ ಎಂಬುದನ್ನು ಬಿಚ್ಚು ಮನದವರೆಲ್ಲ ಅರಿತುಕೊಳ್ಳಬಹುದು, ಚಿನ್ನ ಚಿನ್ನವೇ ಎಲ್ಲಿದ್ದ ರೇನು ಎಂಬುದು ತ್ರಿಕಾಲಾಬಾಧಿತ ಸತ್ಯ.

# ಶ್ರೀರಾಮ ಚರಿತಮಾನಸ

ನಾನಾ ಪುರಾಣ ನಿಗಮ ಸಮ್ಮತವಾದ ಶ್ರುತಿಸಿದ್ಧಾಂತ ನಿಚೋಡ (ಸಾರ)ವಾದ, ಚತುರ್ವಿಧ ಪುರುಷಾರ್ಥವಾದ ಬುದ್ಧಿ ಪೂರ್ವಕ ರಚಿಸಿರುವ ಗ್ರಂಥವೆಂದು ಗ್ರಂಥಕಾರರಾದ ಗೋಸ್ವಾಮೀ ತುಲಸೀದಾಸರು ಹೇಳಿದ್ದಾರೆ. ನಿಜಕ್ಕೂ ಇದೊಂದು ಮೇರುಕೃತಿ. ಅಸದೃಶ ಮಹಾಕಾವ್ಯ.

ಮಾನಸ ಮರ್ಮಜ್ಞ ಡಾ|| ಎಂ. ಕೆ. ಭಾರತೀರಮಣಾಚಾರ್ಯರ ಈ ಗ್ರಂಥದ ಸರಳ ಕನ್ನಡ ಗದ್ಯಾನುವಾದ, ಅರ್ಥವಿವರಣೆಗಳೊಂದಿಗೆ ಕನ್ನಡಲಿಪಿಯಲ್ಲಿ ಮೂಲಪಾಠ ಸಹಿತ ಪ್ರಕಟವಾಗಲಿದೆ.

ಮಾನಸದಲ್ಲಿರುವ ಪ್ರತಿಯೊಂದು ಪ್ರಕರಣದ ಬಗ್ಗೆ ರಾಮ ಸಾಹಿತ್ಯ ಪರಂಪರೆಯಲ್ಲಿ ಅದು ಬೆಳೆದು ಬಂದ ಬಗೆಯನ್ನು ವಿವರಿಸುವ ವಿದ್ವತ್ಪೂರ್ಣ ಸಂಶೋಧನಾತ್ಮಕ ವಿವರಣೆ ಇರುವುದು.

ವಿಚಾರಿಸಿ :

## ಶ್ರುತಿ ಪ್ರಕಾಶನ ಮಂದಿರ

266/8, ಮೂರನೇ ಮುಖ್ಯರಸ್ತೆ, ಹನುಮಂತನಗರ

ಬೆಂಗಳೂರು – 19

ದೂರವಾಣಿ : 6 2 5 8 2 1